ಮೊದಲನೆಯ ಮುದ್ರಣ—ಡಿಸೆಂಬರ್ ೧೯೩೪
ಎರಡನೆಯ ಮುದ್ರಣ—ಡಿಸೆಂಬರ್ ೧೯೪೫

ಎರಡು ರೂಪಾಯಿ

# ಬುಕ್ಕು ಬಿಚ್ಚುವ ಮುಂಚೆ

ಈ ಪುಸ್ತಕ ಓದೋರು, ದಯಮಾಡಿ—

ಮೆಲ್ಲಗೆ ಮನಸಿನಲ್ಲಿ ಓದಿಕೊಬಾರದು. ಗಟ್ಟಿಯಾಗಿ ಕಿವಿಮೇಲೆ ಬೀಳೋ ಹಾಗೆ ಓದಿಕೊಬೇಕು. ಬೇಗ ಅರ್ಥ ಆಗ್ತದೆ.

ಪುಸ್ತಕದಲ್ಲಿ ಅಲ್ಲಲ್ಲೆ ಅರ್ಧಾಕ್ಷರ ಬರುತ್ತೆ. ಪದಾನ ಅಲ್ಲಿಗೇ ನಿಲ್ಲಿಸದೆ, ಮುಂದಿನ ಪೂರ್ಣಾಕ್ಷರಾನೂ ಕೂಡಿಸಿಕೊಂಡರೆ, ಪದ್ಯ, ಇಳಿಜಾರಿನಲ್ಲಿ ನೀರು ಹರಿದಹಾಗೆ ಹರೀತ್ತದೆ; ಇಲ್ಲದೆಹೋದರೆ, ಬಟ್ಟೆ, ಕಾಗದ, ಹರಿದಹಾಗೆ ಹರೀತ್ತದೆ. ಉದಾಹರಣೆಗೆ: ಇದರಾಗ್ ಐತೆ—ಇದರಾಗೈತೆ, ಮೊಕ್ ಮೂರ್ ನೀರು—ಮೊಕ್ಮೂರ್ನೀರು . . .

ಓದಿದ್ದರಲ್ಲಿ ಏನಾದರೂ 'ಯೆಂಡಕುಡಕನ ಯಾಕರಣ,' 'ಬಡವರ ಬಾಸೆ' ತೊಂದರೆ ಕೊಟ್ಟರೆ, ಕೊನೇಲಿ 'ರತ್ನನ ಕನ್ನಡಕ್ಕೆ ಕನ್ನಡಿ' ಇದೆ. ಪದದ ನಂಬರು, ನೋಡಿಕೊಂಡು 'ಕನ್ನಡಿ'ಗೆ ತಿರುಗಿಕೊಂಡರೆ, ಎಲ್ಲಾ ಗೊತ್ತಾಗ್ತದೆ.

ಇಲ್ಲಿಯ ಪದಗಳಲ್ಲಿ ಎರಡು ಪದ ಮಾತ್ರ ಬೇರೆ ತೋಟದಿಂದ ತಂದ್ಕೊಂಡದ್ದು. ಆದರೆ ಅದರಲ್ಲಿ 'ನಂ ನಂ ಮಾತು' ಅನ್ನೋದನ್ನ 'Popular Songs of the Persians' ಅನ್ನೋದರಿಂದ ಅನಾಮತ್ತಾಗಿ ಎತ್ಕೊಂಡ ಹಾಗೆ, 'ಯೆಂಡದ್ ತೊಂದ್ರೆ' ಅನ್ನೋದನ್ನೂ ಎತ್ಕೊಂಡಿದ್ದೀನಿ ಅನ್ನೋದು ನನಗೆ ಬಾಬಯ್ಯಾಣೇಗೂ ಜ್ಞಾಪಕ ಇಲ್ಲ. ಆದರೆ ನೋಡಿದರೇನೋ ಎತ್ಕೊಂಡಿರೋದು ನಿಜ.

ಕಡೇದಾಗಿ—ಈ ಬುಕ್ಕಿಗೆ ಒಂದಾರು ಚಿತ್ತಾರ ಬರಕೊಟ್ಟವರು ನಮ್ಮ ಕೋ. ಶಿವರಾಮ ಕಾರಂತರಿಗೆ ಎರಡೂ ಕೈ ಜೋಡಿಸಿ ಹಣೆವ್ಯಾಗಿಟ್ಟು ಮುಗೀತೀನಿ.

---

# ಬುಕ್ಕಿನ ಜೀವಾಳ



## ಚಿತ್ತಾರಗಳು

# ಸಮರ್ಪಣೆ

---

ಈ 'ಹೆಂಡದಮರಿ'ಯ

ಉದಯ ಅಭ್ಯುದಯಗಳಿಗೆ

ಕಾರಣರಾದ

**'ಮಹಾಹೆಂಡ'ಗಳಿಗೆ**



ನಮ್ದೇ ಲೋಕ ವುಟ್ಟಿಸ್ಕೊಬೇಕು
ಈ ಲೋಕಾನೆ ಮರ್ತು !

(ಪುಟ ೯೬)

# ರತ್ನನ ಮೊಕಾಬಿಲೆ

---

## ೧. ಮೊಟ್ಮೊದಲು

ನನಗೂನೆ ಯೆಂಡಕ್ಕು ಬಲಬಲೆ ದೋಸ್ತಿ.
ಕುಡದ್‌ಬುಟ್ಟ್ಯಾಗ್ ಆಡೋದು ನಂಗ್ ಪೂರ ಜಾಸ್ತಿ.
ನಂಗ್ ಎಸರು ಯೋಳ್ತಾರೆ—ರ್ರ್ರ್ರ್ರ್ರ್ರ್ರತ್ನ.
ನಾನ್ ಆಡೋ ಪದಗೋಳು ಯೆಂಡದ್ ಪ್ರಯತ್ನ. ೧

ಮಾಬಾರ್ತ ಬರೆಯಾಕೆ ಯಾಸಂಗ್ ಇನಾಯ್ಕ
ಸಿಕ್ಟಂಗೆ ನಂಗ್ ಒಬ್ಬ ಬೇವಾರ್ಸಿನಾಯ್ಕ
ಸಿಕ್ದೋನೆ, ನನ್ ಆಡ್ನ ಕೂಡಿಸ್ದ ಬರ್ದು.
ಯೇನ್ ಐತೊ ಯಾರ್ ಬಲ್ರು ಔಂಗ್ ಇರೊ ದರ್ದು! ೨

‘ಬರಕೊಂಡ್ರೆ ಬರಕೊಂಡ್ ಓಗ್, ನಿಂಗೂನೆ ಐಲು;
ಆದಸ್ಟೂ ಮಾಡಾನೆ ಸಾಯ ನಂಕೈಲು’
ಅಂದ್ಕಂಡ್ ಔನ್ ಬರದಿದ್ನ ಅಚ್ಗ್ ಆಕೋಕ್ ಒಪ್ಪಿ
ಕಳಿಸಿವ್ನಿ. ಬೋದೀರ ನನಗೇನ್ರ ತೊಪ್ಪಿ! ೩

ಅಕ್ಸಾರ ಗಿಕ್ಸಾರ ನನಗೇನೂ ಬರ್ದು.
(ದೊಡ್ ಚಾಕ್ರಿ ಬೇಕಂದ್ರೆ ಓದ್‌ಬೇಕು ದರ್ದು!)
ಪದಗೋಳು ಚಂದ್ ಇದ್ರ ಯೆಂಡಕ್ ಸಿಪಾರ್ಸಿ!
ಚಂದಾಗ್ ಇಲ್ದಿದ್ರನಕ ತೊಪ್ಗೆ ಬೇವಾರ್ಸಿ! ೪

---

## ೨. ಕುಡಕರ್ ಮಾತ್ವ

ಕುಡಕರ್ ಮಾತ್ವ ತಿಳಕೊಳ್ಬೇನೆ
ನೂಕ್ಬಾರ್ದ್ ಔರ್ನ ಕೆಳಗೆ;
ಯಾವ್ ಚಿಪ್ನಾಗ ಯಾವ್ ಮುತ್ತ್ ಐತೊ
ಒಡದಿ ನೋಡ್ಬೇಕ್ ಒಳಗೆ! ೧

ಕೊಚ್ಚೆ ನೀರೀನ್ ಸೋದೀಸ್ತ್ ಅಂದ್ರೆ
ಸಿಕ್ಕೋಕಿಲ್ವ ಗಂಗೆ?
ಸಾಜಾ ಯೋಳೋನ್ ಯಾರಾದ್ರೇನು?
ಸತ್ಯ ಕಣ್ ಕಂಡೌಂಗೆ! ೨

ಅರ್ತ್ ಇಲ್ಲಾಂತ ನೆಗಬೇಡಾಣ್ಣ
ನಾ ಕುಡದಾಡೋ ಮಟ್ಟು!
ಕುಡಕನ್ ಪದಗೋಳ್ ಒಕ್ಗ್ ನೋಡಿದ್ರೆ
ಮಸ್ತಾಗ್ ಅವೆ ಗುಟ್ಟು! ೩

'ರವ್ವಿ ಕಾಣದ್ ಕವ್ವಿ ಕಂಡ'
ಅಂದ್ರೆ ಕವಿಗೋಳ್ ತತ್ತ್ವ—
'ಕವ್ವಿ ಕಾಣದ್ ಕುಡಕ ಕಂಡ'
ಅನ್ನೋದ್ ಕುಡಕರ್ ಮಾತ್ವ! ೪

---

## ೩. ಸೋಸೋದು

ಅರ್ತ ಮಾಡ್ಕಂಡ್ ಇಂಗಲ್ಲ ಇಂಗೆ
ಅನ್ನೋರ್ ಮಾತು ಗಂಗೆ!
ಅರ್ತ ಆಗ್ದಿದ್ರು ಸಿಕ್ದಂಗ್ ಅನ್ನಾದ್
ಚಂದ್ರನ್ ಮುಕ್ಕ್ ಉಗದಂಗೆ. ೧

---

## ೪. ಮನ್ಸರ್ ಮಾತು

ಯೋಳಾದ್ ಏನ್ರ ಯೋಳಾದ್ ಇದ್ರೆ
ಝಟ್‌ಪಟ್ನ ಏಳ್ ಮುಗೀಸು.
ಯಾವ್ದಕ್ ಇಕ್ಬೇಕ್ ಗೊತ್ತ್ ಮಾಡ್ಕೊಂಡಿ
ಆಮೇಕ್ ದೊಣ್ಣೆ ಬೀಸು. ೧

ಸುತ್ಕೊಂಡ್ ಸುತ್ಕೊಂಡ್ ಮಾತಾಡ್ತಿದ್ರೆ
ಕ್ಯೋಳಾಕ್ ಬಲ್ ಪಜೀತಿ.
ಬೈಗ್ರ್ ಕೊರದಂಗ್ ಕೊರಿತಾನಿದ್ರೆ
ಯಾವ್ ದೇವರ್ಗೆ ಪ್ರೀತಿ? ೨

ಕುಂಬಾರ್ಗೌಡನ್ ಚಕ್ರಕ್ಕೊನೆ
ಗಾಳ ನೋಡಿದ್ ಯಾನ್ನ
ಸುತ್ಕೊಂಡ್ ಸುತ್ಕೊಂಡ್ ಓಗೋದ್ ಸಾಜ!
ಆದ್ಯಾಕ್ ನನ್ಗೆ ನಿನ್ಗೆ? ೩

ಕ್ಯೋಳೋವ್ರ್ ಇನ್ನಾ ಕ್ಯೋಳ್ಬೇಕೊಂತ
ಕುಂತ್ಕೊಂಡ್ ಇದ್ದಂಗೇನೆ
ಯೋಳೋದ್ನ್ ಎಸ್ಟೋ ಅಸ್ಟ್ರಲ್ ಏಳಿ
ಮನೆಗ್ ಓಗೋನ್ಗೆ ಮೇನೆ! ೪

ಮಾತ್ ಇರಬೇಕು ಮಿಂಚ್ ಒಳದಂಗೆ!
ಕೇಳ್ದೋರ್ 'ಹ್ಞಾ' ಅನಬೇಕು!
ಸೋನೆ ಯಿಡದ್ರೆ ಉಗದ್ ಅಂದಾರು:
'ಮುಚ್ಕಂಡ್ ಓಗೋ ಸಾಕು!' ೫

ಮನ್ಸನ್ ಮಾತ್ ಅಂದ್ರ್ ಎಂಗ್ ಇರಬೇಕು—
ಕವಣೆ ಗುರಿ ಇದ್ದಂಗೆ!
ಕೇಳ್ದೋರ್ ಮನಸೀಗ್ ಲಗತ್ತ್ ಆಗಬೇಕ್
ಮಕ್ಕಳ್ ಮುತ್ತ್ ಇದ್ದಂಗೆ! ೬

---

## ೫. ರತ್ನನ್ ಪರ್ಪಂಚ

ಯೋಳ್ಕೊಳ್ಳಾಕ್ ಒಂದ್ ಊರು
ತಲೇಮ್ಯಾಗ್ ಒಂದ್ ಸೂರು
ಮಲಗಾಕೆ ಬೂಮ್ತಾಯಿ ಮಂಚ;
ಕೈ ಯಿಡದೋಳ್ ಪುಟ್ನಂಜಿ
ನೆಗನೆಗತ ಉಪ್ಗಂಜಿ
ಕೊಟ್ಟ್ರಾಯ್ತು ರತ್ನನ್ ಪರ್ಪಂಚ! ೧

ಆಗಲೆಲ್ಲ ಬೆವರ್ ಆರ್ಸಿ
ತಂದದ್ರಲ್ಲ್ ಒಸಿ ಮುರ್ಸಿ
ಸಂಜೇಲಿ ವುಳಿ ಯೆಂಡ ಕೊಂಚ
ಯಿರ್ತ್ತ ವ್ಶೈ ರ್ಝುಂ ಅಂದ್ರೆ
ವಾಸ್ನೆ ಘಂ ಘಂ ಅಂದ್ರೆ
ತುಂಭೋಯ್ತು ರತ್ನನ್ ಪರ್ಪಂಚ ! ೨

ಯೇನೋ ಕುಸಿಯಾದಾಗ
ಮತ್ತ್ ಎಚ್ಚಿ ವೋದಾಗ
ಅಂಗೇನೆ ಪರಪಂಚದ್ ಅಂಚ
ದಾಟ್ಕಂಡಿ ಆರಾಡ್ತ
ಕನ್ನಡದಲ್ ಪದವಾಡ್ತ
ಯಿಗ್ಗೋದು ರತ್ನನ್ ಪರ್ಪಂಚ ! ೩

ದುಕ್ಕಿಲ್ಲ ದಾಲಿಲ್ಲ
ನಮುಗ್ ಅದರಾಗ್ ಪಾಲಿಲ್ಲ
ನಾವ್ ಕಂಡಿಲ್ಲ್ ಆ ತಂಚ ವಂಚ
ನಮ್ಮಸ್ಟಕ್ ನಾವಾಗಿ
ಇದ್ಬಿದ್ರಲ್ಲ್ ಆಯಾಗಿ
ಬಾಳೋದು ರತ್ನನ್ ಪರ್ಪಂಚ ! ೪

‘ ಬಡತನ ಗಿಡತನ
ಯೇನಿದ್ರೇನ್ ? ನಡತೇನ
ಚೆಂದಾಗ್ ಇಟ್ಕೊಳ್ಳಾದೆ ಅಚ್ಚ! ’—

ಅಂದ್ಕೊಂಡಿ ಸುಕವಾಗಿ
ಕಸ್ಟಕ್ ನೆಗಮೊಕವಾಗಿ
ನೆಗೆಯೋದೆ ರತ್ನನ್ ಪರ್ಪಂಚ ! ೫

ದೇವ್ರ್ ಏನ್ರ ಕೊಡಲಣ್ಣ
ಕೊಡದಿದ್ರೆ ಬುಡಲಣ್ಣ
ನಾವೆಲ್ಲ ಔನೀಗೆ ಬಚ್ಚ!
ಔನ್ ಆಕಿದ್ ತಾಳ್ದಂಗೆ
ಕಣ್ಣ್ ಮುಚ್ಕೊಂಡ್ ಯೋಳ್ದಂಗೆ
ಕುಣಿಯಾದೆ ರತ್ನನ್ ಪರ್ಪಂಚ! ೬

---

## ೬. ಕನ್ನಡ್ ಪದಗೊಳು

ಯೆಂಡ ಯೆಡ್ತಿ ಕನ್ನಡ್ ಪದಗೊಳ್
ಅಂದ್ರೆ ರತ್ನಂಗ್ ಪ್ರಾಣ!
ಬುಂಡೇನ್ ಎತ್ತಿ ಕುಡದ್ಬುಟ್ಟಾಂದ್ರೆ—
ತಕ್ಕೊ! ಪದಗೊಳ್ ಬಾಣ! ೧

ಬಗವಂತ್ ಏನ್ರ ಬೂಮೀಗ್ ಇಳದು
ನನ್ ತಾಕ್ ಬಂದಾಂತ್ ಅನ್ನು;
ಪರ್ಗಿರೀಕ್ಸೆ ಮಾಡ್ತಾನ್ ಔನು—
ಬಕ್ತನ್ ಮೇಲ್ ಔನ್ ಕಣ್ಣು! ೨

‘ ಯೆಂಡ ಕುಡಿಯಾದ್ ಬುಟ್‌ಬುಡ್ ರತ್ನ!’
ಅಂತ್ ಔನ್ ಏನಾರ್ ಅಂದ್ರೆ—
ಮೂಗ್ ಮೂರ್ ಚೂರಾಗ್ ಮುರಸ್ಕೊಂತೀನಿ
ದೇವರ್ ಮಾತ್ಗ್ ಅಡ್ಬಂದ್ರೆ! ೩

‘ ಯೆಂಡ ಬುಟ್ಟೆ. ಯೆಡ್ತೀನ್ ಬುಟ್‌ಬುಡ್ ! ’
ಅಂತ್ ಔನ್ ಏನಾರ್ ಅಂದ್ರೆ—
ಕಳದೋಯ್ತು ಅಂತ ಕುಣದಾಡ್ತೀನಿ
ದೊಡ್ಡ್ ಒಂದ್ ಕಾಟ ! ತೊಂದ್ರೆ! ೪

‘ ಕನ್ನಡ್ ಪದಗೋಳ್ ಆಡೋದ್ನೆಲ್ಲ
ನಿಲ್ಲೀಸ್ ಬುಡಬೇಕ್ ರತ್ನ! ’
ಅಂತ್ ಔನ್ ಅಂದ್ರೆ—ದೇವ್ರ್ ಆದ್ರೆ ಏನು !
ಮಾಡ್ತೀನ್ ಔನ್ಗೆ ಖತ್ನ! ೫

ಆಗ್ನೆ ಮಾಡೋ ಐಗೊಳ್ ಎಲ್ಲಾ
ದೇವ್ರೆ ಆಗ್ಲಿ—ಎಲ್ಲ !
ಕನ್ನಡ್ ಸುದ್ದೀಗ್ ಏನ್ರ ಬಂದ್ರೆ
ಮಾನಾ ಉಳಸಾಕಿಲ್ಲ ! ೬

ನರಕಕ್ಕ್ ಇಳ್ಸಿ ನಾಲ್ಗೆ ಸೀಳ್ಸಿ
ಬಾಯ್ ಒಲಿಸಾಕಿದ್ರೂನೆ—
ಮೂಗ್ನಲ್ ಕನ್ನಡ್ ಪದವಾಡ್ತೀನಿ !
ನನ್ ಮನಸನ್ನ್ ನೀ ಕಾಣೆ! ೭

ಯೆಂಡ ವೋಗ್ಲಿ! ಯೆಡ್ತಿ ವೋಗ್ಲಿ!
ಎಲ್ಲಾ ಕೊಚ್ಕೊಂಡ್ ವೋಗ್ಲಿ!
ಪರ್ಪಂಚ್ ಇರೋ ತನಕ ಮುಂದೆ
ಕನ್ನಡ್ ಪದಗೊಳ್ ನುಗ್ಲಿ! ೮



# ಬುಂಡೇ ಬಕ್ತ ರತ್ನ

## ೭. ಯೆಂಡ

ಯೆಂಗೀಸ್ಗ್ ಎಂಗೆ ಅರಸ್ನ ಕುಂಕ್ಮ—
ಗಂಡೀಗ್ಗ್ ಅಂಗೆ ಯೆಂಡ.
ವುಟ್ಟಿದ್ ಮನ್ಸ ರುಂಡಾಂತ್ ಅಂದ್ರೆ
ಯೆಂಡದ್ ಬುಂಡೆ ಮುಂಡ. ೧

ಬೂಮೀ ಜನಗೊಳ್ ಯೆಂಡದ್ ಮರಕೆ
ಊವು ಕಾಯ್ ಇದ್ದಂಗ.
ಯೆಂಡದ್ ಮರಕೇ ಬತ್ತಿ ಕೊಟ್ರೆ
ಮನ್ಸ ಬದಕೋದ್ ಎಂಗೆ? ೨

ಮನ್ಸಾಂತ್ ಅನ್ನೋ ಮೀನ್ ಬದಕೋದ್ಕೆ
ಯೆಂಡದ್ ನೀರೇ ಮುಖ್ಯ!
ಅನಬೋವಸ್ತನ್ ಮಾತ್ ಸುಳ್ಳಾಗ್ದು—
ಸತ್ಯ ರತ್ನನ್ ವಾಕ್ಯ! ೩

ಮನ್ಸನ್ ಜನ್ಮ ಬಂದಿದ್ರೂನೆ
ಯೀರ್ದೆ ಪೋದ್ರೆ ಯೆಂಡ—
ಅಂತಾ ಮನ್ಸ ಬೂಮಿಗ್ ಬಾರ!
ಬದಕಿರೋದು ದಂಡ! ೪

## ೮. ಯೆಂಡದ್ ತೊಂದ್ರೆ

ಬಿಟ್ಟಿದ್ದೆ ಯೆಂಡ ಅಲ್ಲಿ—
ನೆಟ್ಗೆ ಬಂದೆ ಇಲ್ಲಿ.
ಎಲೇಲೇಲೇ ರಸ್ತೆ!
ಯೇನು ಅವ್ವೆವಸ್ತೆ!
ಮೈ ಕೈ ಯೆಲ್ಲ ಮುದರಿ
ಯಾಕೇ ಕುಣೀತಿ ಕುದರಿ?
ಕೊಟ್ಟೆಯಲ್ಲ ಗಸ್ತು!
ಕಾಡದಿದ್ದೀಯ ರಸ್ತೆ!

ಚಂದ್ರನ್ ಮುಕವೇಕ್ ಸೊಟ್ಟು?
ಅದ್ದು! ಬಲಗಣ್ ಭಟ್ಟು!
ಉಳ್ದಿರೋ ಎಡದಾಗಣ್ಣು
ಯೆಚ್ಚಿದ್ ಲಿಂಬೇ ಅಣ್ಣು!
ಏನೋ ಚಂದ್ರ! ಪೆಂಗೆ!
ನಾಚ್ಕೆ ಇಲ್ವೆ ನಿಂಗೆ!
ಕೆಟ್ಟವರ್ ಕುಡಿತಾರ್ ಅಂದ್ರೆ
ನಿಂಗ್ಯಾಕ್ ಎಂಡದ್ ತೊಂದ್ರೆ?

ನೋಡ್ ಅಲ್ಲ್ ಬೀದಿ ದೀಪ—
ಗಿರ್ಕಿ ವೊಡೀತ್ ಪಾಪ!
ತಿರ್ ತಿರ್ ತಿರ್ ತಿರ್ ತಿಗ್ರ್ತಾ
ತೂರಾಡ್ತದೆ ತೂಗ್ತಾ!

ಇಲ್ಲ್ ಇರೋ ಒಂದಕ್ಕ್ಯಾನ
ಸೋದೀನ್ ಇಲ್ಲ ಗ್ನ್ಯಾನ!
ಸಾಲಾಗ್ ನಿಂತವೆ ನಟ್ಟು—
ಯೆಂಡ ಕುಡದ್ಬುಟ್ಟು! ೩

ದೊಡ್ಡು ಚಿಕ್ಕು ಎಲ್ಲಾ—
ನೋಡ್ದ ಅವಗೊಳ್ ಗುಲ್ಲ!
ಇವರು ಕುಡದೊರ್ ಮುದ್ದ
ನಂಗೆ ಮಾತ್ರ ಸುದ್ಧ!
ಯೆಂಡ ಕುಡದೊರ್ ನಡಮೆ
ನಮಗೆ ಮಾನಕ್ಕ್ ಕಡಮೆ!
ಯೆಂಡದ್ ಅಂಗಡೀಗಾನ
ಆದಕೇ ಇಂತಿರಗೋನ! ೪

———

## ೯. ರತ್ನನ್ ಯೋಚ್ನೆ

ಬಯಸಿದ್ ಸಾಮಾನ್ ಬೇಕಾದಂಗೆ
ಇರಲಿ ಇಲ್ದೇನ್ ಇರಲಿ—
ತಾಪತ್ರೇಯನಕ್ ತಪ್ಪಿದ್ದಲ್ಲ!
ಸುಳ್ಳಂತ್ ಆನ್ಸ್ಯಾನ್ ಬರಲಿ! ೧

ಬುಂಡೇಲ್ ಒಂದ್ ತೊಟ್ ಇರೊಗಂಟ್ಲೂನೆ
      ಸಿದ್ದೆ ಗಿದ್ದೆ ಬರದು !
ಬುಂಡೇ ಕಾಲಿ ಆಗೋದ್ರನಕ
      ಸಿದ್ದೆ ಬರಲೇ ಬರದು ! ೨

ಈ ತಾಪತ್ರೇನ್ ತಳ್ಳಾಕಾಕೆ
      ಏನ್ ಮಾಡ್ಬೇಕೊ ಕಾಣೆ !
ಯೋಚಿಸ್ದಸ್ಟು ತಗಲ್ಕೊಂತೈತ್ ಆ
      ಯೋಚ್ನೇಗ್ ಒಂದ್ ಒಸ್ ಸಾಣೆ ! ೩

ಬಯಸಿದ್ ಸಾಮಾನ್ ಬೇಕಾದಂಗೆ
      ಇರಲಿ ಇಲ್ದೇನ್ ಇರಲಿ—
ತಾಪತ್ರೇಯನಕ್ ತಪ್ಪಿದ್ದಲ್ಲ !
      ಸುಳ್ಳಂತ್ ಅನ್ಸ್ಗಾನ್ ಬರಲಿ ! ೪

---

## ೧೦. ಈ ಸವಾಲ್ಗ ಏನ್ ಏಳ್ತೀರಣ್ಣ?

ಯೆಂಡ್ತಂಗ್ಡೀಗ್ ಕುಡಿಯೋರು ಓಗೋವಂಗ್ ಓಯ್ತಾರೆ
      ಗಂಡಸ್ರು ದೇಸ್ತಾನಗಳ್ಗೆ!
ದೇವ್ರ್ ಅವ್ರಿಗ್ ಇತ್ತಂದ್ರ ಗುಡೀಲಿ—ನಮ್ಗೇನು?
      ನಾವ್ ಕುಡಿಯೊ ಯೆಂಡಾನೆ ದೇವ್ರು! ೧

ಗುಡಿಯಾಗ ಪೂಜಾರಿ ಕಸ್ಕೊಳ್ತಾನ್ ಅಕ್ರಾಸ
ಪಡಕಾನೆ ಮುನಿಯಪ್ಪನಂಗೆ!
ದೇವರ್ನ ಕಂಡವ್ರು ಸುಕಪಡೊಳ್ ಮಾದ್ರೀಲಿ
ನಾವೂನ ಸುಕಪಡ್ತೀವ್ ಕುಡ್ದು! ೨

ನಂ ನೋಡಿ ನಗ್ತಾರೆ! ಬಕ್ತರ್ಗೆ ಬೊಗ್ತಾರೆ!
ಯತ್ವಾಸ ಏನ್ ನಂಗು ಔರ್ಗು?
ಬೇಸರ ಬೇಡಣ್ಣ ಕೇಳಿದ್ದಕ್ ಏಳ್ಬುಡಿ—
ಈ ಸವಾಲ್ಗೆ ಏನ್ ಏಳ್ತೀರಣ್ಣ? ೩

---

## ೧೧. ಯೆಂಡ ಕುಡಿಯೋರ್ ನಾವು

ದೊಡ್ಡೋರ್ಗೆ ಎಚ್ಗೆ ಸಂಬ್ಳಾಂತ್ ಅಂದ್ರು
ಚಿಕ್ಕೋರ್ ಕೆಲ್ಸಕ್ ಕೋತ!
ಆನೆ ಮೈನ ಬೆಳಸಬೇಕಂದ್ರು—
ಆವ್ಗೆ ಬಡಕಲ್ ವೋತ! ೧

ಗುಡಿಸಿಲ್ಗೆ ಉಲ್ಲು ಸಾಲ್ದಿದ್ರೂನೆ
ಮಾಡೀಗ್ ಮಾಡಿ ಬಿಡ್ತಿ!
ರೂಪಾಯ್ಗೆ ಒಂದ್ ಕಾಸ್ ಕಮ್ಮಿ ಬಂದ್ರೆ
ಬಡವೊನ್ ಮನೇ ಜಪ್ತಿ! ೨

ನಾಯ್ನ ನಾಯೇ ತಿಂತಾದಂತೆ!
ಮೀನ್ಗೆ ಮೀನೆ ತಿಂಡಿ!
ಮನ್ಸನ್ ಮನ್ಸ ತಿಂತಾನ್ ಈಗ
ಜೀವ ಪೂರ ಯಿಂಡಿ! ೩

ಯೆಂಡ ಕುಡಿಯೋರ್ ನಾವ್ ಇಂಗಿಲ್ಲ!
ಬುಂಡೆ ಪೂರ ತಂದಿ
ಪಕ್ದೋನ್ ಕೈಲಿ ಕಾಸ್ ಇಲ್ದಿದ್ರೆ
ಔನ್ಗು ಕೊಡತೀವ್ ಸೇಂದಿ! ೪

ನಂತಾಕ್ ಬಂದ್ರೆ ಯೋಳ್ಕೊಡ್ತೀವಿ
ದಾನ ದರ್ಮಕ್ ಅರ್ತ;
ಸಾಜ ಕೇಳಿ ರೇಕ್ಕೊಂಡ್ ಓದ್ರೆ—
ಕೋಪಾನೆಲ್ಲ ವೆರ್ತ! ೫



## ೧೨. ಸತ್ಮೇಲ್ ಏನೈತಣ್ಣ?

ಬೆಳದಿಂಗಳ್ ರಾತ್ರೇಲಿ ಈಚೋರಿ ಬತ್ತಂದ್ರೆ
ಈಚ್ಲೊಂಡ ಚೆಲ್ದಂಗೆ ನೆಪ್ಪಾಯ್ತದೆ.
ಆಕಾಸದ್ ಚಂದ್ರನ್ನ ಪಡಕಾನೆ ದೀಪಕ್ಕೆ
ವೋಲೀಸ್ದೆ ವೋಯ್ತಂದ್ರೆ ತಪ್ಪಾಯ್ತದೆ. ೧

ಕುಡದೋರು ಮತ್ತೊಂದು ಬೀಳೋಹಂಗ್ ಬಿದ್ರೋವೆ
ಮನೆಗೋಳು ಮರಗೋಳು ಬೀದೀಲೆಲ್ಲಾ.
ಪಡಕಾನೆ ಜನದಂಗೆ ಬಡದಾಡ್ತ ಕಾಯ್ತಾವೆ
ಕಾಗೇಗಳ್ಗ್ ಒಸ್ನೀನ ಬುದ್ಧೀಸಿಲ್ಲ. ೨

ಇದ್ ಕಂಡ್ರೆ ಪಡಕಾನೆ ಕಣ್ಗ್ ಕಟ್ಟಂಗಾಯ್ತದೆ
ತೊಟ್ಟ್ ಯೆಂಡ ಬೇಕಂದ್ರೆ ಬುಂಡೇಲಿಲ್ಲ.
ಯೆಂಡ್ ಇಲ್ಲಾಂತ್ ಅಲದಾಡೊ ನನ್ನಂತ ಪಾಪೀನ
ಇದುವರೆಗೆ ಬೂಂತಾಯಿ ಕಂಡೋಳಲ್ಲ. ೩

ಸುಂಕ್ ಅತ್ಕೊಂಡ್ ಏನ್ಬತ್ತು? ಇಲ್ಲದ್ಕ್ ಅತ್ತ್ ಏನ್ಬತ್ತು?
ಕಟ್ಟೈತೆ ಕಸ್ಟ ಸುಕ ವುಟ್ಟೀಟ್ಗೀನೆ!
ಕಟ್ಟಿದ್ದನ್ ಆಟ್ಟ್ ಉಂಡು ಅನಬೌಸೋಕ್ ಆಗದಿದ್ರೆ
ಪ್ರಾಣಾನ ಕಳಕೋಬೇಕ್ ಒಂದೇಟ್ಗೀನೆ! ೪

ಅಳಗೀಳೋದ್ ಎಲ್ಲಾನ ಯೆಂಗಿಸ್ಗೆ ವೊಪ್ತಾದೆ—
ನೆಗತಿರಬೇಕ್ ಗಂಡಸ್ರು ಪ್ರಾಣ್ ಓದ್ರೂನೆ!
ಬದಕಿದ್ರೆ ಯೆವ್ತಾರ ಪಡಕಾನೇಗ್ ಓಗ್ ಬೌದು!
ಸತ್ಮೇಲ್ ಏನೈತಣ್ಣ? ದೊಡ್ ಸೊನ್ನೇನೆ! ೫

## ೧೩. ಬೇವಾರ್ಸಿಗೆ

ತಿತಿ ಮಾಡಿಸೋರ್ಗ್ ಏನ್ ಗೊತ್ತೈತೊ
ಚೆಡ್ಡಿ ವೊಲಿಯೊ ಕೆಲಸ?
ಓದ್ಸೊ ಐಗೋಳ್ ಕಟ್ಕೋಂತಾರ
ಸೂಳೇ ಕಾಲೀನ್ ಗೊಲಸ? ೧

ಬೇವಾರ್ಸಿ! ನಿಂಗ್ ಏನ್ ಗೊತ್ತೈತೊ
ಯೆಂಡ ಕುಡಿಯೊ ಬಾಬ್ತು?
ಯೇಸರ್ಗತ್ತೇಗ್ ಆದಂಗೇನೆ
ನಿಂಗೂ ವಯುಸ್ಸ್ ದಬ್ತು! ೨

ಯೆಂಡ ಕುಡಿಯೋದ್ ಕೆಟ್ಟು. ಗೊತ್ತು.
ನಿನ್ ಯಾರ್ ಕೇಳೀದ್ರು ಅದನ?
ಹತ್ರ ಬಾಂದ್ರೆ ಹತ್ತೀ ಮೇಲೆ?
ನಾನ್ ಯಾರ್ ಗೊತ್ತೊ? ರತ್ನ! ೩

ಬಾಯ್ಗೆ ಬೀಗ ತಗಲೀಸ್ಕೊಂಡಿ
ಬರಿಯೋದಿದ್ರೆ ಬರಕೊ!
ಮುಗ್ಗಲ್ ಕಂತೆ ಬಿಚ್ಕೋದಿದ್ರೆ
ನೀ ಬಂದಂಗೆ ತಿರಕ್ಕೊ! ೪

## ೧೪. ರತ್ನನ್ ಕುಸಿ

ಯೆಂಡ ಮುಟ್ಟಾಗ್ಲಿಲ್ಲ ನಂಗೆ
ಏನೋ ಕುಸಿಯಾಗ್ತೈತೆ!
(ಕುಡಕನ್ ಮಾತ್ ಅಂದ್ರಂಗೆ ಅಲ್ಲ!
ನೆಗ ಉಕ್ಕ್ ಬರತೈತೆ?) ೧

ಈಚಲ್ ಮರದಲ್ಲ್ ಮಲಗಿದ್ದ್ ಯೆಂಡ
ಕಟ್ಟಿದ್ ಮಡಕೇಗ್ ಅದ್ರುಗ್
ಬಾರಿ ಪೀಪಾಯ್ನಾಗ್ ಇಳಕೊಂಡಿ
ತುಂಬ್ಕೊಂತೈತೆ ಸುದ್ರುಗ್. ೨

ಅಲ್ಲಿಂದ್ ಇಲ್ಗೆ ಇಲ್ಲಿಂದ್ ಅಲ್ಗೆ
ಪೀಪಾಯ್ನಲ್ಲ್ ಉಳ್ಳಾಡಿ
ಕುಡಕನ್ ಬುಂಡೇಲ್ ಉಟ್ಕೊಂತೈತೆ!
ಎಂತಾ ಜನ್ಮ ನೋಡು! ೩

ರಬ್ಬರ್ ಚೆಂಡನಂಗ್ ಅಲ್ಲಿಂದ್ ಇಲ್ಗೆ
ಯೆಂಡ ಉಳ್ಳಾಡ್ತಿದ್ದು
ಕೊನೆಯಾಗ್ ಸಾಂತಿ ಕಂಡ್ಕೊಂತೈತೆ
ಕುಡಕನ್ ಒಟ್ಟ್ಯಾಗ್ ಬಿದ್ದು! ೪

ಸಿಕ್ಕಿದ್ ದೇಹ ತಬ್ಬಿಡಕೊಂಡಿ
ಆತ್ಮ ಅಲಿಯೋವಂಗೆ
ಯೆಂಡ ಅಲದಿದ್ ನೆಪ್ ಮಾಡ್ಕಂಡ್ರೆ—
ವೈರಾಗ್ಯಂ ಆಂತದ್ ನಂಗೆ! ೫

ಬ್ರಮ್ಮ ಅನ್ನೋ ಆದರಲ್ಲ್ ಆತ್ಮ
ಬೆರಕಂಡ್ ಓಗೋವಂಗೆ
ಬೆಸಕೋಂತೈತೆ ವೈನಾಗ್ ಯೆಂಡ
ಗುರತೇ ಗೊತ್ತಾಗ್ದಂಗೆ! ೬

ಯೆಂಡ ಮುಟ್ದಾಗ್ಲೆಲ್ಲ ನಂಗೆ
ಏನೋ ಕುಸಿಯಾಗ್ತೈತೆ!
ಕುಸೀಗ್ ಕಾರಣ ಗೊತ್ತಾಯ್ತಾಗ—
ಕುಣಿಯೋವಂಗ್ ಆಯ್ತೈತೆ! ೭

---

## ೧೫. ಸಮಾದಾನ

ಕುಡದ್ಬುಟ್ಟು ಮೋರೀಲ್ ನಾ ಬಿದ್ಕೊಂಡ್ ಇವ್ನೀಂತ್ ಏಳಿ
ಎಲ್ಲಾರ ನೆಗ್ತಾರೆ ಸುಂಸುಂಕೇನೆ.
ಎಲ್ರುಂಗೇ ಮುನ್ಸ—ಇವನೇನೋ ಒಸ್ ತಪ್ದಾಂತ
ಅನ್ನಾಲ್ಲ—ಬೆಪ್ಗಳ್ಗೆ ಏನ್ ಏಳಾನೆ! ೧

ಆಕಾಸ್ದಲ್ ಸೂರ್ಯಾವ್ನೆ—ದೊಡ್ಡ್ ಮುನ್ಸ—ವಾಸ್ತವ—
ಗ್ರಾಸ್ತ್ನಂತೆ ಅಗಲೆಲ್ಲ ತಿರಗಾಡ್ತಾನೆ;
ಸಂಜೆ ಆಯ್ತ್ ಅಂದರ್ ಸಾಕ್—ಪಚ್ಚಿಮುದೂರಾಚೇಲಿ
ಮುಡಗೀರೊ ಪಡಕಾನೇಗ್ ಓಡೋಯ್ತಾನೆ! ೨

ಪಟ್ಟಾಗಿ ಒಡದ್ಬುಟ್ಟು ತೂರಾಡ್ತ ತೂಗ್ತಾನೆ!
ಕಣ್ಗಳ್ನ ಕೆಂಪಿಗ್ ಮಾಡ್ ತೇಲೀಸ್ತಾನೆ!
ನನ್ ಅಣಕ್ಸೊ ನರಮುನ್ಸ ಸೂರ್ಯನ್ಗೆ ಬಾಯ್ಬುಟ್ಟೆ
ಅದಕಂತೆ ಇದಕಂತೆ ವೋಲೀಸ್ತಾನೆ! ೩



ತೂರಾಡ್ತ ಮೋರೀಗೆ ಪೋಚ್ತಾನೆ ಸೂರ್ಯಪ್ಪ—
ಕೆಸರೆಲ್ಲ ಛಿಲ್ಲಂತ ಮೇಲ್ ಆರ್‍ತದೆ!
ಅದಕಂಡು 'ಕತ್ಲಾತು ಕತ್ಲಾತು' ಅನ್‌ಕೊಂಡಿ
ಬೆಪ್ತಕಡಿ ಲೋಕೆಲ್ಲ ಕೂಗ್ ಆಕ್ತದೆ! ೪

ಚಿಕ್ಕೋರ್ ಸಿಕ್ಕೋರಣ್ಣ ಎಲ್ಲಾರ್ ನೆಗಾಕೆ!
ದೊಡ್ಡೋರ್ ಎಂಗಾಡಿದ್ರ ಎಲ್ಲಾನ ಸೈ!
ಲೋಕಾನೆ ಇಂಗೈತೆ—ನಾನ್ ಯಾಕ್ ದುಕ್ಪಡಲಿ—
ಮುನಿಯುನ್ಗ ಯೆಂಡಕ್ಕು ಬೋಲೋರೇ ಜೈ! ೫

## ೧೬. ಪ್ರಾರ್ತನೆ

ಬ್ರಮ್ಮ! ನಿಂಗೆ ಜೋಡೀಸ್ತೀನಿ
ಯೆಂಡ ಮುಟ್ಟದ್ ಕೈನ!
ಬೂಮೀ ಉದ್ಕ ಬೊಗ್ಗಿಸ್ತೀನಿ
ಯೆಂಡ ತುಂಬ್ಕೊಂಡ್ ಪೈನ! ೧

ಬುರ್ ಬುರ್ ನೊರೆ ಬಸಿಯೋವಂತ
ಒಳ್ಳೆ ವುಳಿ ಯೆಂಡ
ಕೊಡ್ತೀನ್ ನನ್ದು ಪ್ರಾರ್ತ್ನೆ ಕೇಳು
ಸರಸೋತಮ್ಮನ್ ಗಂಡ! ೨

ಸರಸೋತಮ್ಮ ಮುನಸ್ಕೊಂಡೌಳೆ
ನೀನಾರ್ ಒಸ್ನಿ ಯೋಳು;
ಕುಡದ್ಬುಟ್ ಆಡ್ಟ್ರ ತೋಲ್ತ್ರಾದಣ್ಣ
ನಾಲ್ಗೆ—ಬಾಳ ಗೋಳು! ೩

ಅಕ್ಸ್ರನೆಲ್ಲಾ ಸರಸೋತಮ್ಮ
ಪಟ್ಟಾಗ್ ಇಡಕೊಂಬುಟ್ಟೆ
ಮುನಿಯ ಯೆಂಡ ಬುಡೋವಂಗೇನೆ
ಬುಡತಾಳ್—ಔಳ್ ಕೈ ಗಟ್ಟೆ! ೪

ಮುನಿಯಂಗಾರ ಕಾಸ್ ಓಗ್ತೈತೆ
ಯೆಚ್ಗೆ ಯೆಂಡ ಬುಟ್ರೆ;
ಸರಸೋತಮ್ಮಂಗ್ ಏನೋಗ್ತೈತೆ
ಮಾತ್ ಸಲೀಸಾಗ್ ಕೊಟ್ರೆ? ೫

ನಂಗೆ ನೀನು ಲಾಯ್ರಿಯಾಗಿ
ನನ್ ಕೇಸ್ ಗೆದ್ಗಿದ್ ಕೊಟ್ರಿ
ಮಾಡ್ತೀನಣ್ಣ ನಿನ್ ವೊಟ್ಟೇನ
ವುಳೀ ಯೆಂಡಕ್ ವೊಟ್ರಿ ! ೬

ಕಮಲದ್ ಊವಿನ್ ಕುರ್ಚಿ ಮೇಗೆ
ಜೋಕಾಗ್ ಕುಂತ್ಕೊ ನೀನು !
ನಾಕೂ ಬಾಯ್ಗೂ ನಾಕು ಬುಂಡೆ
ಯೆಂಡ ತತ್ತೀನ್ ನಾನು ! ೭

ಸರಸೋತಮ್ಮಂಗ್ ಯೋಳಾಕಿಲ್ಲ—
ನೀನೇನ್ ಎದರ್ಕೋಬೇಡ ;
ಕೇಳಿದ್ ವರಾನ್ ವೊಂದೀಸ್ಕೊಟ್ರಿ—
ತಕ್ಕೊ ! ಯೆಂಡದ್ ಫೇಡ ! ೮

---

## ೧೭. ಸನ್ಯಾಸಿ ರತ್ನ

ಯಿಂದ್ ಒಬ್ಬ ಬೌದ್ಧ ಸನ್ಯಾಸಿ
ಮರದಡಿ ತನ ಬಟ್ಟೆ ಆಸಿ
ಕುಂತಿದ್ದ ಪದುಮಾಸನಾಕಿ—
ಕಣ್ ಮುಚ್ಚೋದ್ ಒಂದೇನೆ ಬಾಕಿ ! ೧

ಕಾಲಿಗ್ ಔನ್ ಮುಂದಾಗ ತೊದಲು
ಬಂದಂಗೆ ಯೆಣ್ ಒಬ್ಳು ಓದ್ಲು—
ಘಮ್ಮಂತ ವಾಸ್ನೆ ಸುಳದಂಗೆ!
ಫಳ್ಳಂತ ಮಿಂಚು ವೊಳದಂಗೆ! ೨

ತಂಗೆ ಕಣ್ ಮಾಡ್ದೋಳ ಕುರ್ತಿ
'ಚಂದದೀ ದೇದಾಗ ಬರ್ತಿ
ಒಲ್ಸೇನೆ!' ಅಂದಿ ಸನ್ನ್ಯಾಸಿ
'ಛೆ' ಅಂದ ಮನದಾಗ ಯೋಸಿ ೩

'ಒರಗೀನ್ ಅಲಂಕಾರ ತಳಕು!
ಒಳಗಿನ್ದ ಕಂಡ್ರೇನೆ ಬೆಳಕು!'
ಅಂದಿ ಆ ಬೌದ್ದ ಸನ್ನ್ಯಾಸಿ
ಯಿರ್ತಿದ್ದ ಸತ್ಯಾನ ಸೋಸಿ! ೪

ನಾನೂನೆ ಅಂಗೆ ಸನ್ನ್ಯಾಸಿ!
ಮೂರೊತ್ತು ಯೆಂಡಾನ ಮೂಸಿ
ಮರ್ತ್‌ಬುದ್ಧೀನ್ ಬುಂಡೇನ ತುರ್ತು!
ಒಳಗೀನ್ ಒಂದ್ ಯೆಂಡೆ ನಂಗ್ ಗುರ್ತು? ೫

## ೧೮. ಗುಟ್ಟು

ನಾ ಕುಡದಾಡೋ ಪದಗೊಳ್ನೆಲ್ಲ
ಬೀದೀಯೋರ್ ಜನಗೋಳು
ಈಟೊಂದ್ ಒಗಳಾಕ್ ಏನ್ ಕಾರಣಾಂದ್ರೆ—
ಯೋಳ್ತೀನ್ ಚೆಂದಾಗ್ ಕೇಳು. ೧

ಯಿದ್ದೋಗೆಲ್ಲ ದೇವ್ರಾಗೌಳೆ—
ಔಳ್ ಆ ಸರಸೋತಮ್ಮ ;
ಯಿಣೆ ಯಿಡದಿ ಔಳ್ ಆಡಿದ್ರೆ
ನಾ ಕುಡದ್ ಆಡ್ತೀನಮ್ಮ ! ೨

ಸರಸೋತಮ್ಮನ್ ಎಡದೋಳ್ ನೋಡು !
ನನ್ ಎಡಗೈನು ನೋಡು !
ಔಳ್ತಾವ್ ಇದ್ರೆ ಯಿಣೆ ಬುಂಡೆ—
ನನಗೈತ್ ಯೆಂಡದ್ ಬುಂಡೆ ! ೩

ಬುಂಡೆ ಮಾತ್ರ ನೋಡಿದೇನಣ್ಣ !
ಎಂಗೈತ್ ಆದರದ್ ತಳಕು !
ಅದಕೆ ಅಮ್ಮನ್ ಯಿಣೇ ಅಂಗೆ
ನನ್ದು ಮಾತಿನ್ ಪಲಕು ! ೪

# ಮುನಿಯನ್ ಗಿರಾಕಿ ರತ್ನ

## ೧೯. ಬಲೆ ಜಿಪ್ಣ ಮುನಿಯ

ಊರಾಚೆ ಪಡಕಾನೆ ಇಟ್ಟ್ವಾನೆ ಮುನಿಯ—
ಬಲ್ ಜಿಪ್ಣ ಪಡಕಾನೆ ಯೆಜಮಾನ ಮುನಿಯ.
ಮನೇ ತಾಕ್ ಯಾರೋದ್ರು ಬಿದರ್ತಾನಾ ಮುನಿಯ—
ಯಾರ್ ಬಿಕ್ಸೆ ಬೇಡ್ತಾರ್ ಅಂತ್ ಎದರ್ತಾನಾ ಮುನಿಯ—
ಊರಾಚೆ ಪಡಕಾನೆ ಯೆಜಮಾನ ಮುನಿಯ—
ನಂ ಮುನಿಯ ! ನಂ ಮುನಿಯ ! ಜಿಪ್ಣ ನಂ ಮುನಿಯ ! ೧

ಮನೇ ತಾಕ್ ಯಾರ್ ಬರ್ಲಿ ಕೂಗ್ತಾನ್ ಔನ್ ಕಿರ್ಲಿ—
ಬಂದೋರ್ಗೆ ಕೇಳೋಹಂಗ್ ಕೂಗ್ತಾನ್ ಆ ಮುನಿಯ
ಮನೆಯೋರ್ನ ಬೊಯ್ಯೋಹಂಗ್ ಕೂಗ್ತಾನ್ ಆ ಮುನಿಯ :
' ಬೋರಯ್ಯ ತಂದ್ ಕೊಟ್ನ ತಕ್ಕೊಂಡೋದ್ ನೂರ ?
ಮನೇಗ್ ಬೇರ್ ಆಕ್ಬೇಕಿನ್ ಮಂಗ್ಳೂರೆಂಚ್ ಸೂರ !
ತಕ್ಕೊಂಡೋದ್ ಮಕ್ಕಿನ್ನಾ ಬಡ್ಡಿ ಕೊಡ್ಡಿರ್ಲಿ—
ಉಪ್ಗೆ ನೆ ವುಳಿಗೂನೆ ಕಾಸ್ ಎಲ್ಲಿಂದ್ ತರ್ಲಿ ?
ಪರಪಂಚ ಕೆಟ್ಟೋಯ್ತು—ಬಲ್ ಪೂರ ಓಯ್ತು—
ಇಂಗಿದ್ರೆ ನಾವೆಲ್ಲ ಬಾಳ್ ಬದಕಿದಂಗಾಯ್ತು !
ತಕ್ಕೊಂಡೋರ್ ತಕ್ಕೊಂಡಂಗ್ ತಿನ್ಕಂಡ್ ಓಗ್ತಿರ್ಲಿ—
ಗಂಟ್ಲೆಲ್ಲ ಕಟ್ಟೋಯ್ತು ಇವ್ರತ್ರ ವೊರ್ಲಿ !
ಕಟ್ಬೇಕ್ ಇನ್ ಮಂಡೀಗೆ ಸಾವರದೆಂಟ್ ನೂರು !
ಮತ್ಬೇರೆ ಬ್ಯಾಂಕ್ಗಿನ್ನು ಎರಡ್ಸಾವರದ್ ನೂರು !

ಎಲ್ಲಿಂದ ತರಬೇಕೋ ದೇವರ್ಗೆ ಬೆಳಕು !
ಮಿಕ್ಕೋರಿಗ್ ಏನ್ ಗೊತ್ತು ಈ ಜೋಳಿನ್ ಚಳಕು!
ಕೇಳ್ದೋರಿಗ್ ಕೊಟ್ಟಂದ್ರೆ ಅಸಲೇನೆ ಸ್ವಾಅ!
ಇನ್ನಾರನ್ ಕೇಳ್ಬೇಕೊ ಒಡ್ತಿ? ಹ್ಹ ! ಹ್ಹ ! ಹ್ಹ !
ತಕ್ಕೊಂಡೋರ್ ತೆರದಿರ್ಲಿ ಬೇಗ್ಬೇಗ ತಂದು
ಸತ್ತಾರ ಪೋಯಿನ್ನಾಸಿ ವಿಸಗಿಸ ತಿಂದು ! ೨

ಯೆಂಡದಂಗಡಿ ಮುನ್ಯಣ್ಣ ! ಪಡಕಾನೆ ಮುನ್ಯ !
ಏನ್ ಎಲ್ಲಿ ನೀ ಕೂಡ್ಸೊ ಬಲ್ಬಲೆ ಪುನ್ಯ !
ಬೇಡಿದೋರ್ಗೆ ನೀಡ್ಬಿದ್ರೆ ಪಾಪಾಂತ್ ಅಂದ್ರೆ
ಬೇಡೋಕ್ಕೊ ಮುಂಚೇನೆ ಬಾಕ್ಲ್ ಇಕ್ತ ಬಂದ್ರೆ
ಏನ್ ಎಲ್ಲಿ ಮುನ್ಯಣ್ಣ ನೀ ಕೂಡ್ಸೊ ಪುನ್ಯ !
ಜಿಪುಣಾಂದ್ರೆ ನಿನ್ ಬಿಟ್ರೆ ಬೇರಿಲ್ಲ ಮುನ್ಯ ! ೩

---

## ೨೦. ನಂ ದೇವ್ರು ಮುನಿಯ

ಕೈ ಮುಗದು ಕರ್ಪೂರ ಅಚ್ಚಿ
ಕಾಸ್ಕೊಟ್ಟು ತಂಗನಕಾಯ್ ಚಚ್ಚಿ
ಅಡ್ಬಿದ್ರೆ ಕಲ್ಲೆಲ್ಲ ದೇವ್ರೆ !
ಇಲ್ದಿದ್ರೆ—'ಜಾಕರ್ರ್ ಆವ್ರೆ !' ೧

'ಮುನ್ಯಣ್ಣ!' ಅಂದ್ಕೊಂಡಿ ಬಂದಿ
ಝಲ್ ಝಲ್ನೆ ರೂಪಾಯ್ಗೋಳ್ ತಂದಿ
ಸುರಿತಿದ್ರೆ ಕೊಡತೌನೆ ಯೆಂಡ!
ಇಲ್ದಿದ್ರೆ ತರತೌನೆ ದಂಡ! ೨

ಮುನಿಯಂಗು ಆ ದೇವರ್ಗೂನೆ
ಯೆತ್ವಾಸಾನ್ ಏನೇಳ್ ನೋಡಾನೆ!
ಕಾಯ್ ಕೊಟ್ರೆ ದೇವ್ರು ಪರ್ಚಂಡ!
ಕಾಸ್ ಕೊಟ್ರೆ ಮುನಿಯನ್ದು ಯೆಂಡ! ೩

ದೇವ್ರನಕ ಕೊಡಲಿ ಕೊಡದಿರ್ಲಿ
ಮಾಡ್ತಾರೆ ಔನ್ಗೆ ನಂಸ್ಕಾರ;
ಮುನ್ಯ ಯೆಚ್ಚಳ್ತಿ ಬುಡದಿರ್ಲಿ
ಮಾಡ್ತಾರೆ ಔನ್ಗೆ ಸಂಸ್ಕಾರ! ೪

ಮುನಿಯಣ್ಣ! ನೀ ನಮಗೆ ದೇವ್ರು!
ನಾವನಕ ದಿನಾ ಬರಾವ್ರು!
ಕೊಡದಿದ್ರೆ ಯೆಚ್ಚಳತೆ ಯೆಂಡ—
ನಾವ್ ಕೊಡೊ ದುಡ್ ನಿಂಗೆ ದಂಡ! ೫

## ೨೧. ಬಿಕ್ಸೆ

ನನ್ ಎಡ್ತಿ ನುಗ್ಗಿದ್ಲು
ಜೋಬೀಗ್ ಕೈ ಆಕಿದ್ಲು
ಮುನಿಯಣ್ಣ ಯೆಂಡಕ್ ಕಾಸಿಲ್ಲ—
ಸಿರಿಕಿಸ್ನ ನಿಂತೌನೆ!
ಕುಚೇಲ ಬಂದೌನೆ!
ಏನಾರ ಕೊಡಲೇಬೇಕಲ್ಲ! ೧

ನಿನ್ ಯೆಂಡ ಬೇಡ್ತೀನಿ
ಕೊಡದಿದ್ರೆ ಆಡ್ತೀನಿ
ಮುನಿಯ ನಿನ್ ಮೇಲೊಂದು ಮಟ್ಟು!
ಬೇವಾರ್ಸಿ ಬಂದೌನೆ
ಬರಕೋಂತ ನಿಂತೌನೆ
ಮುನಿಯ ನಿನ್ ಗುಟ್ಟೆಲ್ಲ ರಟ್ಟು! ೨

ಬೇಡ್ತೀನ್ ಅಂತ್ ಯೋಳಿದ್ರೆ
ನಿನ್ ಯೆಂಡ ಕೇಳಿದ್ರೆ
ದರ್ಮಕ್ಕೇನ್ ಕೇಳಾಕಿಲ್ಲೇಳು!
ನರಮನಸಾಂತ್ ಅಂದೋನು
ಬಿಕ್ಸೇಗ್ ಕೈ ತಂದೋನು
ಕತ್ತೆ ನಾಯ್ಗೊಳ್ಗಿಂತ ಕೀಳು! ೩

ನಾ ಸುಂಕೆ ಬೇಡಾಲ್ಲ
ನೀ ಸುಂಕೆ ನೀಡಾಲ್ಲ
ಕಾಸ್ಗೂನೆ ನಿಂಗೂನೆ ಪ್ರಾಣ!

ಚಾಕ್ರಿ ನಂಗೇನಾರ
ಕೊಟ್ಟ್ರೆ ಜೀತಕ್ ಪೂರ
ಯೆಂಡ ನೀ ಕೊಡ್ತ್ಯಂದ್ರೆ ಜಾಣ! ೪

ನಿಂಗೇನ್ರ ಬೇಕಿದ್ರೆ
ನನ್ ಕೆಲಸಕ್ ಆಕಿದ್ರೆ
ತಿಕ್ತೀನಿ ಯೆಂಡದ್ ಪೀಪಾಯ್ನ!
ಇಲ್ದಿದ್ರೆ ಗಲ್ದಲ್ಲಿ
ಬಿದ್ದಿದ್ಕೆ ಒಂದ್ ಅಳ್ದಲ್ಲಿ
ಊಳ್ತೀನಿ ನೀ ತಂದ್ ರೂಪಾಯ್ನ! ೫

ನರಮನಸಾಂತ್ ಉಟ್ದೋನು
ಪಕದೋರ್ ಕಸ್ಟಕ್ಕ ಆಗದೋನು
ಜೀವ್ದಣ! ಬೂಮಿಾಗ್ ಔನ್ ಬಾರ!
ತಾ ಮುನ್ಯ ಯೆಂಡಾನ!
ತುಂಬು ನನ್ ಬುಂಡೇನ!
ನಿನ್ ಕತ್ಗೆ ಪೀಪಾಯ್ಗೋಳ್ ಆರ! ೬

---

## ೨೨. ಇದರಾಗ್ ಐತೆ ಮರ್ಮ

ಬೆನ್ನಿನ್ ಮೇಗಿನ್ ಸರಟ್ ಓದ್ರೋಯ್ತು—
ಬೆನ್ ಮ್ಯಾಗ್ ಐತೆ ಚಮ್ಡ!
ಯೆಂಡ ತತ್ತ! ಚಮ್ಡ ಓದ್ಮೇಲ್
ಉಟ್ತೈತಾ ಒಂದ್ ದಮ್ಡಿ? ೧

ಬಡವ್ರೊರ್ ಬದಕೋ ದಾರೀಂತಂದ್ರೆ—
ಈ ಮಾತ್ನಾಗ್ ಐತ್ ಮರ್ಮ!
ಕುಡಕನ್ ಮಾತ್ ಅಂದ್ರ್ ಎಂತಾದ್ದಣ್ಣ—
ಕಾಣದ ಕಣ್ಣೀಗ್ ಸುರ್ಮ! ೨

---

## ೨೩. ಮುನಿಯನ್ ಬೋಣಿ

ಮುನ್ಸ ಎಲ್ಲಿಂದ್ ಎಲ್ಗೋದ್ರೂನೆ
ಬಾಯ್ ಇತ್ತಂದ್ರೆ ಬದಕ್ದ;
ಮೆತ್ಗಿತ್ತಂದ್ರೆ—ಆಳ್ಗೊಂದ್ ಕಲ್ಲು!
ತಕ್ಕೊ! ಇಡದಿ ತದಕ್ದ! ೧

ಯಿಡಿದ್ ದಬಾಯ್ಸಿ ಗಸೀಟ್ರೇಂದ್ರೆ
ಬತ್ತು ತುಂಬಿದ್ ದೊನ್ನೆ!
ಒಳ್ಳೆ ಮಾತ್ನಾಗ್ ತತ್ವಾಂತಂದ್ರೆ
ಮೊಕ್ಷ ಮೂರ್ನಾಮ! ಸೊನ್ನೆ! ೨

ಲೋಕದ್ ಚಾಲ್ ಅಂತಂದ್ರೆ—ಮುನ್ಸ—
ಬಲೆ ಇಕ್ಕಟ್ಟಿನ್ ಓಣಿ!
ಈ ಚಿಕ್ ಓಣೀನ್ ಬಡಾಯ್ಸಾಕೆ
ನಿಂದ್ ಆಗ್ಲಣ್ಣ ಬೋಣಿ! ೩

## ೨೪. ಈ ಮೋಸ ದೋಸವಲ್ಲ

ಆಗಲೆಲ್ಲ ಬೆವರ್ ಅರ್ಸಿ
ಜೀತ ಕೆರ್ಕೊಂಡು
ಅಟ್ಟೀಗ್ ನಾ ಬತ್ತಂದ್ರೆ
ಮೈ ಕೈ ಮುರ್ಕೊಂಡು
ಜೋಬೆಲ್ಲ ಜಡ್ತಿ
ಮಾಡ್ತಾಳ್ ನನ್ ಎಡ್ತಿ! ೧

ಒಂದ್ ದಪ ತಂದ್ ಜೀತ
ಪೂರ ಕೊಟ್ಬುಟ್ಟೆ
ಯೆಂಡಕ್ ಒಂಬತ್ ಕಾಸ
ಕೇಳ್ದ್ರೆ ಬಾಯ್ಬುಟ್ಟೆ—
ಪೊರಕೇನ್ ಎತ್ತಿಡ್ದಿ
ಬಡಿದೌಳ್ ನನ್ ಎಡ್ತಿ! ೨

ಯೆಂಡಾನೆ ನಂ ದೇವ್ರು!
ತಿರ್ಮೂರ್ತಿ ಯೆಂಡ!
ನಮ್ಮುಟ್ಸೆ ಬದ್ಕೋದು
ಸಾಯ್ಸೋದು ಯೆಂಡ!
ಯೆಂಡ ಬುಡ್ತಂದ್ರೆ
ನಂ ಜೀವ್ಕೆ ತೊಂದ್ರೆ! ೩

ಕಲಿಗಾಲ! ಸನಿಗಾಲ!
ಬದುಕೋಕ್ ಆಗಾಲ್ಲ!

ಸಾಚಾ ಮನಸರ್ಗ್ನಕ
ಉಳಗಾಲಾಸಿಲ್ಲ !
ಆದರಿಂದೊಂದ್ ಇಕ್ಮತ್ತ್
ಮಾಡ್ದೆ ! ಬಲ್ ಗಮ್ಮತ್ತ್ ! ೪

ಯೆಂಡಕ್ ಬಂದ್ ಎಳ್ತಾಣೆ
ಕೂದ್ಲಾಗ ಸಿಕ್ಸಿ
ಅಟ್ಟೀಗ್ ಬಂದ್ ತಕ್ಸಾನ
ಜೋಬ್ ಒದ್ರಿ ಬೊಗ್ಸಿ
ಯೆಡ್ತೀಗೆ ಮೋಸ
ಮಾಡ್ಟ್ರು ಸಂತೋಸ ! ೫

ಮೋಸ ನಂಗ್ ಮಾಡಂತ
ಬೇಡ್ತದ್ ಜಗತ್ತು !
ಅದಕೇನೆ ಯಿಡಿದೀನಿ
ಪಟ್ಟಾಗ್ ಇಕ್ಮತ್ತು !
ಈ ಮಾದ್ರಿ ಮೋಸ
ಆಗ್ದಣ್ಣ ದೋಸ ! ೬

———

## ೨೫. ನಾಳೆ

ಯೆಡ್ತಿ ಊರಾಗ್ ಇಲ್ಲ ಮುನಿಯ
ಊಗ್F ಓಗೌಳೆ ಜಾಣೆ !
ಜೀತ ತುಂಬ ಜೋಬೀಲೈತೆ
ನಿಕ್ಕಲ್ಹೋೕವ್ ಅತ್ತಾಣೆ ! ೧

ಅತ್ತಾಣೇಗು ಯೆಂಡ ತತ್ತ
ದೋಸ್ತೀವ್ರ್ ಎಲ್ಲ ಯಿರ್ಲಿ !
ನೀನ್ ನಂಗೇನು ಬುದ್ಯೋಳ್ಬೇಡ
ನಾಳೆ ಗೀಳೆ ಯಿರ್ಲಿ ! ೨

ಆಕಾಸ್ಕಿಂತ ದೂರ್ ಎಚ್ಚೈತೆ
ನಾಳೆಗೂನೆ ನಮ್ಗು !
ಬೂಮಿ ಅನಕ ಮಡಿಕ್ಯಾಳಾಲ್ಲ
ರೂಪಾಯ್ ಗಂಟ್ ಮಾಡೌನ್ಗು ! ೩

ಬಿಲ್ಟೆ ವೊಂಟೋದ್ ಪೀಪಾಯಿಂದ
ಯೆಂಡ ಬಸಿಯೋ ಮಾದ್ರಿ —
ಸುರದೋಗ್ತೈತೆ ಮನ್ಸನ್ ಬದಕು !
ನಾನ್ ಯೋಳಾದು ಕಾತ್ರಿ ! ೪

ಕುಡಕನ್ ಕೈಲಿ ಕಾಸ್‌ಗೀಸ್ ಏನ್ರು
ನಿಂತ್ರು ನಿಲ್ಬೌದಣ್ಣ ;
ಮನ್ಸನ್ ಜೀವ ಮಾತ್ರ ಮುಳಗೋ
ಸಂಜೆ ಮೋಡದ್ ಬಣ್ಣ ! ೫

ನಾಳೇನ್ಕೊಂಡಿ ನರಳೋದೆಲ್ಲ
ಬೆಪ್ಗೋಳ್ ಮನಸಿನ್ ಕನಸು !
ನಾಳೆ ಪಾಡು ! ನಾಳೆ ಬಾರ !
ಈವತ್ಗ್ ಇರ್ಲಿ ಮನಸು ! ೬

ಮನ್ಸನ್ ಜೀವ ಮೂರೇ ನಿಮ್ಸ
ಕುಸಿ ಪಟ್ಬೌನ್ ಗೆದ್ದ!
ತಾಪತ್ರೇನ ತಬ್ಬಿಡುಕೊಂಡಿ
ಗೋಳಾಡೋವನ್ ಬಿದ್ದ! ೭

ತಕ್ಕೊ ಮುನ್ಯ ನನ್ ಅತ್ರಾಣೆ
ಯೆಂಡದ್ ಬುಂಡೆ ಬರ್ಲಿ—
ನಾಳೆ ಯೋಚ್ನೆ ನಂಗೆ ಬೇಡ
ಈವತ್ ಒಂದೇ ಇರ್ಲಿ! ೮

---

## ೨೬. ನಡತೆ

ಬುಂಡೇಗೆ ಯೆಂಡ್ ಎಂಗೆ ಯೆಂಡಕ್ಕೆ ನೊರೆಯೆಂಗೆ
ಅಂಗೇನೆ ಮನ್ಸಂಗು ಒಳ್ಳೆ ನಡತೆ.
ಬುಂಡೇಗೆ ಅಲೆಂಗೆ ಆಲೊಳಗೆ ವುಳವೆಂಗೆ
ಅಂಗೇನೆ ಆಳ್ ನಡತೆ ನರಮನ್ಸಗೆ.
ಅಮಲಿಂದ ಯೆಂಡ್‌ಕುಡಕ ಗುಲ್ಲಿಂದ ಪಡಕಾನೆ
ನಡತೇಂದ ಗೊತ್ತಾಗ್ತ ಒಳ್ಳೆ ಮನ್ಸ.
ಸದ್ದಿಂತ ಕೆಟ್ ಕಾಸ ಮುಕದಿಂದ ಮಾರವ್ನ
ನಡತೀಂದ ನೋಡ್‌ಬೈದು ಕೆಟ್ ಮನ್ಸನ. ೧

ಮುನಿಯಣ್ಣ ಯೆಚ್ಚ್ಕಳ್ತಿ ಬುಟ್ರದೇ ಒಳ್ಳೆ ನಡತೆ!
ನಮ್ಮೊಂಡ ಪಕ್ದೋನ್ಗ ಕೊಟ್ರದೇ ಒಳ್ಳೆ ನಡತೆ!
ನಾ ಕುಡದು ಬೇವಾರ್ಸಿಗ್ ಆಡೋದೆ ಒಳ್ಳೆ ನಡತೆ!
ಬೇವಾರ್ಸಿ ನನ್ ಆಡ್ನ ಬರೆಯೋದೆ ಒಳ್ಳೆ ನಡತೆ! ೨

## ೨೭. ಏನ್ ಏಳ್ಗೋ ಈ ವೃಚ್ಗೆ !

ನಂ ಪಡಕಾನೇಲ್ ವುಂಬ ಮುನಿಯ
ಇಬ್ರೂ ಗಟಾಂಗಟಿ !
ಓದ್ ಸನವಾರ ಬಿತ್ತು ಇಬ್ಬರ್ಗ
ಬಾರಿ ಲಟಾಪಟಿ ! ೧

ಸುರುವಾಯ್ತಣ್ಣ ಮಾರಾಮಾರಿ—
ಯಾವ್ದೊ ಒಂದ್ ಚಿಕ್ ಮಾತ್ಗೆ ;
ಬೆಟ್ದಾಗ್ ಕಲ್ಗೋಳ್ ಪೇರಿಸ್ದಂಗೆ
ಲಾತ್ ಏರ್ಕೊಂತು ಲಾತ್ಗೆ ೨

ನಡನುಗ್ ಎತ್ತಾಕ್ ಕೆಳಕ್ ಕೆಡೀಕೊಂಡ್
ಮುನಿಯುಂಗ್ ಉಂಬ ಬೆಚ್ಗೆ
ತೀಡ್ತಿದ್ರಣ್ಣ—ಮುನಿಯ ಕೂಕ್ಕೊಂಡ್
ಆಕ್ದ ಕೈನ ಮುಚ್ಗೆ ! ೩

ಇಬ್ರಲ್ಲೊ ಒಬ್ಬ ಠಾರಾಗ್ಬೇಕು—
ಅಲ್ಲೀಗಂಟ್ಲೂ ಸೈನೆ !
ಪೋಲೀಸ್ನೋರ್ ಬಂದ್ ಇಡದ್ಬುಟ್ರಣ್ಣ—
ತಕ್ಕೋ ! ತಕ್ಕ ತೈನೆ ! ೪

ಕೇಡೀಗ್ ಕೇಡಿ ಮಿಲಾಯಿಸ್ಬೇಕು—
ಆಗ್ ಅದ್ ನೋಡಾಕ್ ಮಜ !
ಮುನಿಯ ವುಂಬ ಇಬ್ರು ಅಂತಾರು—
ಈಗ್ ಬಿದ್ದಾರೆ ಸಜ ! ೫

ದುಗ್ಗಾಣಿ ಸೊಪ್ಪು ಉಟ್ಟಾಕಿಲ್ಲ
ಒಂದ್ ಸೇರ್ ಅಕ್ಕಿ ನುಚ್ಗೆ !
ಆಲ್ಕ ಜಗಳಕ್ ಜೀವಾಂತಂದ್ರೆ—
ಏನ್ ಏಳ್ತಾ ಈ ವುಚ್ಗೆ ! ೬

---

## ೨೮. ನಂ ಬೋಜ ಮುನಿಯ

ಯಿಂದ್ ಒಬ್ಬ ರಾಜ್ ಇದ್ದ—ಬೋಜಾಂತ್ ಔನೆಸರು ;
ಔನ್ ಮುಂದೇನ್ ಈಗ್ನೋರು— ಪನ್ನೀರ್ ಮುಂದ್ ಕೆಸರು !
ಔನತ್ರ ಯಾರಾನ ಆಡೀದ್ರೆ ಬಂದ್ ಪಕ್ಸ—
ಕೊಡ್ತಿದ್ನಂತ್ ತಕ್ಕೋಂತ ಅಕ್ಸರಕೊಂದ್ ಲಕ್ಷ ! ೧

ನಾನೂನೆ ಆಡ್ತೀನಿ ಏರ್ದಾಗ ಮತ್ತು !
ನನ್ ಆಡಿನ್ ಜೋಕಂದ್ರೆ ಬೇವಾರ್ಸೀಗ್ ಗೊತ್ತು !
ನನ್ ಆಡಗೊಳ್ ಪಸಂದ್ಗೆ ಗೆಣೆಯ ಬೇವಾರ್ಸಿ
ಯೆಂಡ ಕುಡದೋನಿಂದೆ ಅಲೆಯೋದೆ ಸಾಕ್ಸಿ ! ೨

ನಮಗೇನ್ ಬೇಕಿಲ್ಲಾಣ್ಣ ಅಕ್ಸರ್ಕ್ ಒಂದ್ ಲಕ್ಸ !
ಒಂದ್ ಕಾಸ್ ಬುಡಬೇಕಲ್ಲ ಮುನಿಯಣ್ಣನ್ ಬೊಕ್ಸ !
ಅದಕೂ ಬೇಡಾಂತಂದ್ರೆ ಅಳತೆ ಬುಡುವಾಗ
ತೊಟ್ಟಿಚ್ಗೆ ಬುಡತಂದ್ರೆ ಮುರಕ ಮನೆಯಾಗ? ೩

ಮುನಿಯಣ್ಣಂಗ್ ಏನ್ ಗೊತ್ತು ನನ್ ಪದಗೊಳ್ ಸೋಕು !
ಯೆಂಡದ್ ಪದಗೊಳ್ನಾವೆ ತಿಳಿಯೋದ್ಕ ಬೇಕು !
ಈಚ್ಲೆಂಡದ್ ಸೀ ಕಂಡ್ರೆ ಪೀಪಾಯ್ ಒಂದ್ ಪಕ್ಸ—
ಬಿರಕ್ ಬುಟ್ರೊ ಬುಟ್ಟಾತು ಮುನಿಯಣ್ಣನ್ ಬೊಕ್ಸ ! ೪

## ೨೯. ಬುದ್ವಾದ

ಕಾಸಿಗ್ ಕಾಸ್ ಗಂಟಾಕಿ
ಒಟ್ಟೇಗ್ ಬೆನ್ ಅಂಟಾಕಿ
'ನಾನೂ ಒಬ್ ಸೆಟ್ಟಿ
ದುಡ್ಡೈತೆ ಗಟ್ಟಿ'
ಅಂತಂತಿ ಮುನ್ಯ !
ಚಂದಾನ ಮುನ್ಯ ? ೧

ಯೆಚ್ಟ್ ಅಳತೆ ಕೊಡವಲ್ಲೆ !
ಬಿಡಕಾಸೂ ಬಿಡವಲ್ಲೆ !
ನೀನೂ ತಿನ್ವಲ್ಲೆ !
'ಕೋ' ಅಂತನ್ವೊಲ್ಲೆ !
ಚಂದಾನ ಮುನ್ಯ ?
ನೀನೇ ಯೋಳ್ ಮುನ್ಯ ! ೨

ಯಿಂಗೆಲ್ಲ ಗಂಟ್ಮಾಡಿ
ತೈಲ್ ತೈಲಿ ದುಡ್ಮಾಡಿ
ನೀ ಸತ್ರೆ ನಿಂಗೆ
ಸುಡಗಾಡೆ ಕೊನ್ಗೆ !
ಸಾಸ್ವತವ ನೀನು ?
ಬುಟ್ಟೇಗ್ ಬಿದ್ ಮೀನು ! ೩

ಸುಂಸುಂಕೆ ಒದ್ದಾಡ್ತಿ
ಮೂರೊತ್ತೂ ದುಡ್ಮಾಡ್ತಿ

ಅನಬೋಸ್ದೆ ಸಾಯ್ತಿ!
ನಿಂಗೇನ್ ಕಿಪಾಯ್ತಿ ?
ಬಿಡಕಾಸ್ಗೆ ನಡಗು!
ಮಕ್ಕಳ್ಗೆ ಮಡಗು ! ೪

ನಿನ್ ಮಕ್ಕಳ್ ಜೂಜಾಡಿ
ದುಡ್ನೆಲ್ಲ ಪೋಲ್ಮಾಡಿ
ಪಡಕಾನೇಗ್ ತೆತ್ರೆ
ಸೂಳೆಮನೆಗ್ ಒತ್ರೆ
ನಿಂಗೇನ್ ಬತ್ ಮುನ್ಯ ?
ಸತ್ ಮೇಲೆ ಸೂನ್ಯ ! ೫

ಅದ್ರಿಂದ ಕೇಳ್ದಂಗೆ
ಯೆಂಡ ಬಿಟ್ ಯೋಳ್ದಂಗೆ
ಕೇಳಿದ್ರೆ ನೋಡು—
ಇಲ್ಲಾಂತ್ ಅನಬೇಡ—
ನೀನಾಗ್ತಿ ಮುನ್ಯ
ಜಗದೊಳ್ಗೆ ಮಾನ್ಯ ! ೬

---

## ೩೦. ಮನಕ್ಕೆ ಒಪ್ಪೋ ಮಾತು

ಯೆಚ್ಗೆ ಯೆಂಡ ಕೇಳ್ತಾನಿದ್ರೆ
ಮಚ್ಚೆ ಎತ್ತಿ ಕೊಚ್ತೀನ್ ಅಂತ
ಯೋಳ್ತೀಯಲ್ಲ ಮುನಿಯಣ್ಣ—

ಕೊಲ್ಲೋ ಕೆಲಸ ಬದಕ್ಸೊ ಕೆಲಸ
ಎಲ್ಲಾ ನಿಂಗೆ ಕೊಟ್ಟೋರಾರು?
ಸಲ್ಲದ್ ಮಾತು ಕಾಣಣ್ಣ ! ೧

ಮಾತ್ಗೆ ಮಾತು! ಯೇಟ್ಗೆ ಯೇಟು!
ಯಾತ್ಕೆ ಯೋಳ್ತಿ ಕೊಲ್ತೀನ್ ಅಂತ?
ಗ್ರಾಸ್ತ ಅಲ್ಲ ನಿನ್ ವಿದ್ದೆ !
ಕಚ್ ಗಿಚ್ ಕಾಸ್ನ ಈಸ್ಕೋವೊಲ್ಲೆ !
ಯೆಚ್ಗೆ ಕೇಳ್ದ್ರೆ ಕೋಪಾ ಬಲ್ಲೆ !
ಮಸ್ತಾಗೈತೆ ನಿನ್ ವಿದ್ದೆ ! ೨

ಕೊಲ್ಲೋ ಕೆಲಸ ನಿಂದ್ ಅಲ್ಲಾಣ್ಣ !
ಕೊಲ್ಲೋಕ್ ಒಬ್ಬನ್ ಮಡಗೌನ್ ದೇವ್ರು !
ಈಸ್ವರನಂತ ಔನ್ ಎಸರು !
ಬ್ರಾಂಣ ಒಬ್ಬ ಅಬ್ಯಾಸಿಲ್ದೆ
ಓಮ ಮಾಡಿ ಸುಟ್ಕೊಂಡ್ನಂತೆ
ಮಿಾಸೆ ಜತೇಗ್ ಗಡ್ಡಾನ ! ೩

ಇನ್ನಾ ಯೋಳ್ತೀನ್ ಕೇಳ್ ಮುನಿಯಣ್ಣ !
ಮಿಾನ್‌ಗಳ್ ಬಂದ್ರೆ ತಿನ್ನಾಕ್ ತನ್ನ
ಯೋಳ್ತದಂತೆ ಗಾಳ್ದುಳ:
'ನನ್ ಇಡದ್ ನುಂಗೋಕ್ ಸುತ್ತೀ ಸುತ್ತೀ
ನೀನ್ ಇಲ್ ಬಂದ್ರೆ ಕುಂತೌನ್ ಅಲ್ಲಿ
ಮೇಲ್ ನಿನ್ ನುಂಗೋಕ್ ಬೆಸ್ತ್ರವ!' ೪

ಯೆಂಡ ಮಾರೋದ್ ನಿಂದು ಕೆಲಸ !
ಬುಂಡೆ ಒಡೆಯಾದ್ ನಿಂಗ್ ಯಾಕಣ್ಣ !
ಕೋಪಿಸ್ಕೇಡ ಮುನಿಯಣ್ಣ !
ಮನಕೆ ಒಪ್ಪೋ ಮಾತೇಳ್ತೀನಿ—
ನಾನು ರತ್ನ ಯೇನೇಳ್ದ್ರೀಂತ
ನೆಪ್ನಾಗ್ ಇಟ್ಕೊ ಮುನಿಯಣ್ಣ ! ೫

---

## ೩೧. ತ್ರುಪ್ತಿ

' ದುಡ್ ಉಳ್ಳೋರು ದುಡ್ ಇಲ್ದೋರು
ಲೋಕಕ್ ಎಳ್ಡೇ ಜಾತಿ ! '
ಅಂತಂದೌನೆ ನಮ್ಮೌನ್ ಒಬ್ಬ !
ಏ ಹೈ ಸಚ್ಚಿ ಬಾತ್ಹಿ ! ೧

ಪೈಲಾದೋರು ದುಡ್ಡಿಗ್ ದತ್ತು—
ಔರ್ ಕಂಡಿಲ್ಲ ತ್ರುಪ್ತಿ !
ಕಾಸ್ ಇಲ್ದಿದ್ರು ದುಸರೀಯೋರ್ಗೆ
ಇದ್ದಿದ್ರಲ್ಲೆ ತ್ರುಪ್ತಿ ! ೨

ದುಸರಿಯೋರ್ದು ತ್ರುಪ್ತಿ ಸತ್ರೆ
ಲೋಕಕ್ ಬಂತು ಚಟ್ಟ !
ಆಗಯಾರೆ ಚಟ್ಟಾಂತಂದ್ರೆ—
ಎಲ್ಲ ಫನ ! ಮಟ್ಟ ! ೩

ಬಡವರ್ ತ್ರುಪ್ತಿಗ್ ದಪ್ಪನ್ ಅಂದ್ರೆ
ಎಲ್ಲಾರ್ ಬಾಯ್ಗೂ ಮಣ್ಣು !
ದೊಡ್ಡು ಚಿಕ್ಕು ಸಬ್ಬಿ ಒಟ್ಗೆ
ಎಕ್ಕ ಉಟ್ಕೋಯ್ತಣ್ಣ ! ೪

ಲೋಕಾನ್ ಬದಕ್ಸೋ ಇಸ್ಕೂಂತ್ ಅಂದ್ರೆ
ದುಸರೀಯೋದ್ರು ತ್ರುಪ್ತಿ !
ಪೈಲಾದೋರ್ಗೆ ಉಸರಾಡ್ಸೋದೂ
ದುಸರೀಯೋದ್ರು ತ್ರುಪ್ತಿ ! ೫

ದುಸರಿ ಜೊತ್ಗೆ ಪೈಲಾದೋದ್ರು
ತ್ರುಪ್ತಿ ಮಿಲಾಯ್ಸೋದ್ರೆ—
ಬೂಮಿಾಗ್ ಇರೋರ್ಗ್ ಯಾಕ್ ಬೇಕಣ್ಣ
ಸೊರ್ಗ ಗಿರ್ಗದ್ ತೊಂದ್ರೆ ! ೬

(ಯೆಂಡಕ್ ಮುನ್ಯ ಸೀರ್ ಗೀರ್ ಬೆರಸಿ
ಮೋಸ ಮಾಡೌನ್ ನೆಪ್ಸಿ ;
ಅದಕೇ ಈವೊತ್ ಕನ್ನಡ್ ಪದಕೆ
ಬೆರಕ್ಯಾಗೈತೆ ಕ್ಷಮ್ಸಿ !) ೭

---

## ೩೨. ನಂ ಮುನಿಯಂದು ಜರ್ಬು

ಯಿಂದೆ ಲೋಟ್ದಾಗ್ ನೀರ್ ಇಟ್ಕೊಂಡಿ
'ಛೂ ಮಂತ್ರ'ಂದ ಏಸು !
ಇಟ್ ನೀರೆಲ್ಲ ಯೆಂಡ್ ಆಗೋಯ್ತು !
ಆದು ಕೆಲಸ ! ಬೇಸು ! ೧

ಮಾತ್ಗೇಳ್ತೇನಿ—ಯಿಂದಿನ್ ಕಾಲ್ದಾಗ್
ಎಂತೆಂತೋರ್ ಇದ್ರಂತ !
ಈಗ್ಲು ಔರೆ—ದೊಡ್ ಪಡಕಾನೆ
ಇಟ್ಟಾಕ್ಸ್ಕೇನೆ ಬಂತ ! ೨

ಕಾಲಿ ನೀರ್ನ ಯೆಂಡ ಮಾಡ್ದ್ರೆ
ಏಸು ಕಿರ್ಸ್ತ ಪರ್ಬು—
ಪಕ್ಕ ಯೆಂಡಾನ್ ನೀರ್ ಮಾಡಾದು
ನಂ ಮುನ್ಯಂದು ಜರ್ಬು ! ೩

ಯೋಳಿಸ್ಕೋಳ್ದೆ ತಿಳಕೊಳ್ಳೋರ್ಗೆ
ಯೋಳ್ದ್ರೆರ್ ಏನಾರ್ ಉಂಟು ;
ಉಗದ್ ಆಂದ್ರೂನೆ ತಿಳಕೊಳ್ದೋರ್ದು—
ದಾರಕಿಂತ್ ಎಚ್ಗೆ ಗಂಟು ! ೪

---

## ೩೩. ಮುನಿಯನ್ ನೊಕ್ಸ್ ಮೂರ್ ನೀರು



ಕೊಕ್ರೆ ಮೀನ್ಗೆ ವೊಂಚ್ ಆಕ್ದಂಗೆ
ಕಪ್ಪೇಗ್ ಆವು ಕಾಯ್ಕೊಂಡಂಗೆ
ನಿಂತ್ಕೊಂಡೌನೆ ಮುನ್ಯ !
ಯೆಂಡಾ ಮಾರೋ ಗೆಣ್ಯ !
ಕುಡಿಯೋರ್ನ್ ಇಡದಿ ಸುಲದಾಕೋಕೆ
ಮಡಗೌನ್ ಎಂಡದ್ ಮನೆಯ ! ೧

ಕುಡಿಯೋರ್ಗ್ ಎಂಗಿದ್ರೇನು! ಬುಂಡೆ
ತುಂಬಿದರಾಯ್ತು ಅಂದ್ ಮುನ್ಯ ಯೆಂಡಕ್

ನೀರ್ ಗೀರ್ ಬೆರಸಿ ಮಾರಿ
ತೊಟ್ ತೊಟ್ಗೆ ನೆ ಪ್ಯೋರಿ
ಬಡವನ್ ಜೀತದ್ ಪುಡಿಕಾಸ್ನೆಲ್ಲ
ಕೆರಕೋಂತೌನೆ ಗೋರಿ ! ೨

ಪ್ರೈಯಿನ್ ರಕ್ತ ನೀರ್ ಮಾಡ್ಕೊಂಡಿ
ಬೆವರಿನ್ ಮಳೇಲ್ ಕಾಸ್ ಕೆರಕೊಂಡಿ
ನೆಟ್ಗೆ ಬಂದ್ರೆ ಇಲ್ಗೆ
ಮೋಸಮಾಡ್ತ ಮೆಲ್ಗೆ
ಬತ್ಕೊಂಡ್ ಒಟ್ಟೇನ್ ಬಗದಿರಕೋಳೊ
ಡೊಳ್ಳೇನ್ ಆಕ್ಟೇಕ್ ಗಲ್ಗೆ ! ೩

ಕೊಟ್ಟದ್ನೆ ಯಿಂದಕ್ ಕೊಟ್ಟೋನು
ಕೊಟ್ಟದ್ಕಿಂತ ಯೆಚ್ ಕೊಟ್ಟೋನು
ಮನ್ಸಾನೆ ಅಂತಂದ್ರೆ—
ದೇವ್ರೆ ಔನ್ ಅಂತಂದ್ರೆ—
ಕೊಟ್ಟದ್ನೊನೆ ಕೊಡದಿದ್ದೋನ್ಗೆ
ಯೆಸರ್ ಇಕ್ಕೋದೆ ತೊಂದ್ರೆ ! ೪

ಕಾಸ್ ಈಸ್ಕೊಂಡಿ ಕಸ ಕೊಟ್ಟೆ
ದರ್ಮ ಗಿರ್ಮ ಮೂಲೇಗ್ ಇಟ್ಟೆ
ದುಡ್ ಕೂಡಾಕೋನ್ ಯಾರು ?
ಬೋಗಳ ತಿನ್ನೋನ್ ಯಾರು ?
ಎಲ್ಲಾರೂನೆ ಯೋಳಾದಂದ್ರೆ
'ಮುನಿಯನ್ ಮೊರ್ಕ್ ಮೂರ್ ನೀರು !' ೫

ಯಿಂದ್ ಇಬೀಸ್ನ ಕೈ ಕೈ ಮುಗದಿ
ರಾವಣಂಗ್ ಏಳ್ದ ಕಡೇಗ್ ಉಗದಿ
ಅನ್ಯಾಯ ಬೇಡಾಂತ!
ನ್ಯಾಯಾನೆ ಮಾಡಂತ!
ತಿಳದೋನ್ ಮಾತ್ನ ಮೂಲೇಗ್ ಆಕ್ದೋನ್
ಗತಿ ಏನಾಯ್ತೂಂತ! ೬

ಬಡವನ್ ತಿನ್ನೊ ಸಿರಿಮಂತಮ್ಮ
ಮುನಿಯಂಗ್ ಅಕ್ಕ! ಇವನೆ ತಮ್ಮ!
ಮುನಿಯಂಗ್ ಅಕ್ಕನ್ ಚಾಳಿ
ಮನೇ ಮುರಿಯೋ ಗಾಳಿ!
ಯೋಳಿದ್ ಕೇಳ್ದಿದ್ರೆ ಯಾರ್ಗೇನಂತೆ?
ಎಕ್ಕ ವುಟ್ಹೋಗ್ಲೇಳಿ! ೭

---

## ೩೪. ಯೆಂಡಕ್ಕ್ ತರಪ್ಣ

ಜೀತಾ ಮಾಡಿ ಕಾಸ್ ಕೆರ್ಕೊಂಡಿ
ಆಟ್ಟೇಲ್ ಎಡ್ತೀನ್ ಮೋಸೋಸ್ಕಂಡಿ
ಏನೋ ಕುಡಿಯಾಕ್ ಬಂದ್ರೆ—
ಸೇರಿಗ್ ಸೇರು ನೀರ್ನ ಬೆರಸಿ
ಕಾಸ್ ಕೇಳ್ತೀಯ ಮೋಸ ಮರಸಿ
ಸಾಚಾ ಮನ್ಸರ್ ಬಂದ್ರೆ? ೧

ನನ್ ಕೈ ಕಾಸು! ನಂಗ್ ಔಳ್ ಎಡ್ತಿ!
ಮೋಸ ಮಾಡ್ತೀನ್ ನಾನ್ ಔಳ್ಗ ಇಡ್ತಿ!
ಆವಾಗ್ ಅತ್ತಾಗ್ ಬುಡ್ಲಿ!

ಕೂಸೂ ಕೊಟ್ಕೊಂಡ್ ತೆಪ್ಗೆ ತಣ್ಗೆ
ನಿನ್ ಕೈಲ್ ವೋಸ ವೋಗೋದ್ ನನ್ಗೆ
ಮಾನದ್ ಬುಡಕೆ ಕೊಡ್ಲಿ ! ೨

ಯೆಂಡ ಮಾರೋರ್ ಎಲ್ರೂ ಯಿಂಗೇ
ವೋಸ ಮಾಡ್ತಾರಂತ ನಂಗೆ
ನೀನೇಳ್ಬೇಕ ! ನನ್ಗೂ !
ದುಡ್ಡಿನ್ ರುಚಿ ಕಂಡೋರ್ ನಿಂಗೆ
ಎಸ್ಟ್ ಏಳಿದ್ರೇನ್ ನಾವೂ ಸುಂಕೆ ?
ಒಬ್ಬನ್ ಚಾಲೀ ಮನ್ಗೂ ! ೩

ಕುಡಿಯೋ ನನ್ ಬಾಯ್ಗ್ ಇನ್ಮೇಲ್ ಬೀಗ
ಆಕ್ತೀನ್ ಅಂತ ಯೋಳ್ತೀನೀಗ
ಎದೇಗ್ ಕೈನ ತಾಕ್ಸಿ !
ಈ ಮಾತ್ ಓದ್ರೆ ಮಾನಕ್ ತೊಂದ್ರೆ !
ರತ್ನನ್ ಮಾತಿನ್ ತೂಕೀಗಂದ್ರೆ
ರತ್ನನ್ ಎಸರೆ ಸಾಕ್ಸಿ ! ೪

ಯೋಳ್ತೀನ್ ಕೈನ ಎದೆಮೇಲಿಟ್ಟೆ—
ಈವೊತ್ನಿಂದ ಯೆಂಡ ಬುಟ್ಟೆ
ಮಾನಕ್ ಬದಕ್ಬೇಕಂತ !
ಮನಸ ಮಾನ ಎಂಗೈತೇಂತ
ಗೊತ್ತಿಲ್ದೆ ನಾನೂ ಇವ್ನೀಂತ
ಎಂಗೋ ಇದ್ರೆ ಬಂತ ! ೫

ಪ್ರಾಣಕ್ಕಿಂತ ಯೆಂಡ ಯೆಚ್ಚು !
ಯೆಂಡಕ್ಕಿಂತ ಮಾನ ಯೆಚ್ಚು !
ಯೆಂಡದ್ ಮುನಿಯ ! ಜಿಪ್ಣ !
ಮಾನದ್ ಮುಂದೆ ಯಾವ್ದು ಏನೈತೆ ?
ತರ್ಕ್ಕ ! ಕೊಡ್ತೀನ್ ಈಗ್ ಬರತೈತೆ
ಆಳ್ ಯೆಂಡಕ್ಕೆ ತರಪ್ಣ ! ೬

---

## ೩೫. ಮುನಿಯನ್ ನೋಕ್ಕ್ ಮುಸ್ಟಿ

ಬೆಂಕೀನ್ ಇಟ್ಟಿದ್ಲಂತೆ ಯೆಂದ್ ಆಡಗೂಲಜ್ಜಿ—
ಮುನಿಯನ್ಗ ಅತ್ಕೋಂತ ಔಳೀಗಿದ್ ಕಜ್ಜಿ !
ಕೋಳಿ ಕೂಗ್ದಿದ್ರೆಲ್ಲು ಬೆಳಕೇ ಆಗಾಲ್ವ !
ಯೆಂಡ ಇಲ್ದೋಯ್ತಂದ್ರೆ ಆಡಾಕಾಗಾಲ್ವ ? ೧

ಝುಮ್ಮಂತ್ ಇರಬೇಕಾದ್ರೆ ಪದಗೊಳ್ದು ಗತ್ತು
ಏನಾರ ಬೇಕೇ ಬೇಕ್ ಅದಕೊಂದು ಮತ್ತು.
ಇದುವರ್ಗ ಇತ್ ನಂಗೆ ಈಚ್ಲೆಂಡದ್ ಮತ್ತು.
ಇನ್ ಮ್ಯಾಗ್ ಏನೈತೇಂತ ನಿಂಗೇನೊ ಗೊತ್ತು ! ೨

ಯೆಂಡಿಲ್ದೆ ಉಡಗೋದ ರತ್ನ ಅಂತೇಳಿ
ಪುಕ್ಕಾ ಕೆದರ್ ಬೇಡೊ—ಏ ಜಂಬದ್ಕೋಳಿ !
ಪುಟ್ನಂಜಿ ನಂಗೌಳಿ—ಪಾಯ್ಸ ಪರಮಾನ್ನ !
ಯೆಂಡ್ ಯಾಕ್ ಅದಮುಂದೆ ? ಅಳಸಿದ್ ತಂಗ್ಳನ್ನ ! ೩

ಉತ್ತಮ್ ಜನ್ಮಕ್ ಬರೋದ್ ಮನ್ಸನ್ ಪ್ರಯತ್ನ !
ಸತ್ತೋಗ್ ದಫನ್ನಾದ ಯೆಂಡದಯ್ಯ ರತ್ನ !
ಮಳ್ಳಿ ಚಿಗತ್ಕೊಂಡೌನೆ ಪುಟ್ಟಂಜೀ ರತ್ನ !
ನೋಡು ಯೆಂಡ್ ಇಲ್ದೇನೆ ಔನಾಡೊ ಗತ್ತ ! ೪

---

## ೩೬. ಕಡೇ ಆಡು

ಬೇವಾರ್ಸಿ ! ನಿನ್ ಎಸರು ನೆಪ್ಗೇನೆ ಬರದು—
ಯೆಂಡ್ಕುಡಕ್ರು ಏನಂದ್ರು ಕೋಪ ಮಾಡಬಾರ್ದು !
ಇಸ್ಟ್ಕನೆ ಕೂಗಿದ್ದಕ್ಕ್ 'ಓ' ಅಂತ್ ನೀನ್ ಅಂದ್ರೆ
ಎಂಗಾನ ಕೂಗಿದ್ರೆ ಏನೈತ್ ನಿಂಗ್ ತೊಂದ್ರೆ ? ೧

ನೀನೂನೆ ಬಾಳ್ ದಿವಸ ತಸ್ಪಿ ತಕ್ಕಂಡಿ
ನನ್ ಜತೇಗ್ ಬಲ್ ಅಲದೆ—ನನ್ ಆಡ್ ಬರ್ಕಂಡಿ.
ಅಸ್ಟಲ್ದೆ ಯೋಳ್ತಾರ ದೊಡ್‌ದೊಡ್ಡೋರೆಲ್ಲ:
'ಕಸ್ಟ ಪಡದೆ ಕಿತ್ತೀಯು ದೊಡ್ಡಾನೆ ಅಲ್ಲ ?' ೨

ಲೋಕಾನೆ ಪುಚ್ಚುಚ್ಚು ! ಯಿಂದ್ ಇದ್ದಂಗ್ ಇಲ್ಲ !
ವಸ್ತಾದ್ಗೆ ಯೋಳ್ತಾರೆ ಈಗ್ನೋರು—ಮಲ್ಲ !
ಯಾರಾನ ಕೇಳ್ದೋರು ಪದಗೊಳ್ ಚೆಂದ್ ಅಂದ್ರೆ
ಮುಸ್ದಾಗ್ ನಾನ್ ಆಡ್ತೀಸಿ ನೀ ತಿರಗಿ ಬಂದ್ರೆ. ೩

# ಪುಟ್ನಂಜೀ ರತ್ನ

## ೩೭. ನನ್ ಪುಟ್ನಂಜೀ ರೂಪ

ಬೇವಾರ್ಸಿ! ನನ್ ಪುಟ್ನಂಜೀನ
ರೂಪಾನ್ ಆಡ್ತಿನಿ ಬಾಪ್ಪ !
ನಂಗ್ ಆಗಾಗ್ಗೆ ಆಡೀಸ್ತೈತೆ
ನನ್ ಪುಟ್ನಂಜೀ ರೂಪ ! ೧

ಆಲ್ನಲ್ ಕಮಲದ್ ಊ ತೇಲ್ಬುಟ್ಟೆ
ಮೇಲ್ ಒಂದ್ ತೆಳ್ಳಿ ಲೇಪ
ಚಿನ್ನದ್ ನೀರ್ನಲ್ ಕೊಟ್ಟಂಗೈತೆ
ನನ್ ಪುಟ್ನಂಜೀ ರೂಪ ! ೨

ಅಮಾಸೇಲಿ ಅತ್ತೀಸ್ದಂಗೆ
ಒಂದ್ ಅತ್ ನೂರ್ ಮತಾಪ
ಬೆಳಕಾಗ್ತೈತೆ ಕಂಡ್ರೆ ನಂಗೆ
ನನ್ ಪುಟ್ನಂಜೀ ರೂಪ ! ೩

ಔಸ್ದೀಗ್ ಇಂಕ್ರ ಬೇಕಂದ್ರೂನೆ
ಔಳ್ ತಾವ್ ಇಲ್ಲ ಕೋಪ !
ಅದಕೆ ಆಸ್ಟೊಂದ್ ಚಂದಾಗೈತೆ
ನನ್ ಪುಟ್ನಂಜೀ ರೂಪ ! ೪

ನನಗೇನಾರ ಕೋಪ ಬಂದ್ರೆ
ನಂ ನಂ ಪ್ರೀತಿ ನೆಪ್ಪ
ಕರಕೊಂಡ್ ಬಂದಿ ಕೋಪಾನ್ ಇಕ್ತ್ರೈತ್
ನನ್ ಪುಟ್ನಂಜೀ ರೂಪ! ೫

ಬಟ್ಟೇ ಕಪ್ಪೀನ್ ತೊಳಿಯಾಕ್ ನಾವು
ಯೆಂಗಾಕ್ತೀವಿ ಸೋಪ
ಮನಸಿನ್ ಕೆಟ್ ಬಾವನೇಗೊಳ್ಗಂಗೆ
ನನ್ ಪುಟ್ನಂಜೀ ರೂಪ! ೬

ದೇವರ ತಾಕ್ ನಾನ್ ಒಯ್ಯಾಕಿಲ್ಲ
ಅಣ್ಣು ಕಾಯಿ ದೂಪ!
ದೇವರ್ಗ್ ಅಣ್ ಕಾಯ್ ದೂಪ ಎಲ್ಲಾ
ನನ್ ಪುಟ್ನಂಜೀ ರೂಪ! ೭

ಸಿಡಿಯೋ ಮದ್ದಿನ್ ಸುಟ್ಟಾಕ್ದಂಗೆ
ಮಡಗಿದ್ದೇನೆ ಕೇಪ—
ನನ್ ತಾಪತ್ರೇನ್ ಉಡಾಯ್ಸ್ತೈತೆ
ನನ್ ಪುಟ್ನಂಜೀ ರೂಪ! ೮

ಚಿನ್ನದ ಬರಣೀಲ್ ತುಂಬಿಟ್ಟಂಗೆ
ಆಲು ಸಕ್ರೆ ತುಪ್ಪ—
ಒಳ್ಳೇ ಗುಣಗೊಳ್ನ್ ಒಳಗಿಟ್ಟೈತೆ
ನನ್ ಪುಟ್ನಂಜೀ ರೂಪ! ೯

ಪುಟ್ನಂಜೀನ ಕೈ ಇಡಿದೋನು
ನೀನೆ ಭಲೆ ! ಭೂಪ !
ಅಂತ ನಂಗೆ ಬೆನ್ ತಟ್ತೈತೆ
ನನ್ ಪುಟ್ನಂಜೀ ರೂಪ ! ೧೦

ದೇವಸ್ತಾನ್ದಾಗ್ ಎಂಗಿರತ್ತೈತೆ
ಚಿನ್ನದ್ ನಂದಾದೀಪ
ಅಂಗ್ ನನ್ ಆಟ್ಟೀನ್ ಬೆಳಗಿಸ್ತೈತೆ
ನನ್ ಪುಟ್ನಂಜೀ ರೂಪ ! ೧೧

ಇದನ ಕೇಳ್ದೋರ್ ಯಾರಾರ್ ' ಅಯ್ಯೊ !
ಇವನ್ ಒಬ್ ಉಚ್ಚ ! ಪಾಪ !'
ಅಂದೋರ್ಗ್ ' ಅಯ್ಯೋ ಪಾಪಾಂ'ತೈತೆ
ನನ್ ಪುಟ್ನಂಜೀ ರೂಪ ! ೧೨

---

## ೩೮. ಆಗ—ಈಗ

ಯಿಂದೆ ನಾ ಕುಡದ್ ಮೋರೀಗ್ ಬಿದ್ದಿ
ಬೆಳಗೀಗ್ ಒಂಬತ್ ಗಂಟೇಗ್ ಎದ್ದಿ
ಎಂಗೆಂಗೋನೆ ಆಟ್ಟೀಗ್ ಬಂದ್ರೆ
ಏನ್ ಕಾಣಿಸ್ತೂಂತ್ ಅಂತಿ—
ಆರ್ದಿದ್ ಬಲೇನ್ ಒಲಿಯೋ ಜಾಡನ್
ನೋಡ್ತಿದ್ಲ್ ಎಡ್ತಿ ಕುಂತಿ ! ೧

*　　*　　*

ಜೀತ ಮುಗಿಸ್ಕೊಂಡ್ ಈಗ್ ನಾ ನೆಟ್ಗ
ಆಟ್ಟೀಗ್ ಬತ್ತಂದ್ರ ಒಂದೇ ಏಟ್ಗೆ
ಚಿಗರಿ ಚಿಗದಂಗ್ ನನ್ ಪುಟ್ನಂಜಿ
ಬಂದ್ರ ಎಂಗಾಯ್ತೃತ್ ಅಂತಿ?
ಬಂದ್ ಔಳ್ ನಿಂತಾಗ್ ಎದೆಗೊಳ್ ಆಡ್ತವ್—
ಎಳ್ಡಕ್ ಒಂದೇ ತಂತಿ! ೨

---

## ೩೯. ನಂಜಿ -ರತ್ನ

'ಸುಲಿದಿದ್ ಬಾಳೇ ಅಣ್ ಇದ್ದಂಗೆ
ತಲೆ ಮೇಗೌನೆ ಚಂದ್ರ!'
'ಮುಡಿಸೋಕ್ ಮಡಗಿದ್ ಮಲ್ಗೆ ದಂಡೆ
ಇದ್ದಂಗೌನೆ ಚಂದ್ರ!' ೧

'ರತ್ನನ್ಗ ಅದನೆ ತಿನ್ನಿಸ್ತಿದ್ದೆ
ಕೈಗಾರ್ ಎಟಕಿಸ್ತಿದ್ರೆ!'
'ನಂಜೀಗ್ ಅದನೆ ಮುಡಿಸ್ತಾನಿದ್ದೆ
ಕೈಗಾರ್ ಎಟಕಿಸ್ತಿದ್ರೆ!' ೨

---

## ೪೦. ನಂಜಿ ರತ್ನ ತೋಟ್ಕ್ ಓಗಿದ್ರು

ನಂಜಿ ರತ್ನ ತೋಟ್ಕ್ ಓಗಿದ್ರು
ಒಂದಾರ್ ಮಾತಾಡ್ನಿಲ್ಲ;
ಔಗ್ರೋಳ್ ಮಾತಾಡ್ನಿಲ್ಲಾಂತಲ್ಲ—
ಆಡೋಕ್ ಮನಸಾಗ್ನಿಲ್ಲ. ೧

ನಂಜಿ ರತ್ನಂಗ್ ತೋರಿದ್ಲೊಂದು
ದುಂಬಿ ತಬ್ಬಿದ್ ಊವ!
ರತ್ನನ್ ಮನಸಿನ್ ಅಡಗ್ ಸೇರಿತ್ತು
ನಂಜಿ ಮನಸಿನ್ ರೇವ! ೨

ಮನಸಿನ್ ಜೋಡಿ ಯಾಣೆ ಮುಂದೆ
ಬಾಯಿನ್ ಬುಡುಬುಡಕೇನ!
ಮಾತ್ ಇಲ್ದೇನೆ ಅರ್ತ ಆಗ್ತಿದ್ರೆ—
ಆಡೋನ್ ಮನಸ್ನ? ಕೋಣ! ೩

---

## ೪೧. ನಿಂಗ್ ನೆಪ್ಪೈತ ನಂಜಿ?

ಒಂದೇ ಕೇರೀಲ್ ಉಟ್ಟ್ ಬೆಳೆದೋರು
ಒಂದೇ ಬೀದೀಲ್ ಒತ್ ಕಳದೋರು
ನಾವ್ಗೊಳ್ ಆಡಿ ಮಾಡಿದ್ದೆಲ್ಲಾ
ನಿಂಗ್ ನೆಪ್ಪೈತ ನಂಜಿ?

ಕಲ್ಲು ಬಕ್ರಿ ಆರೀಸ್ಕೊಂತ
ಗಂಡ ಯೆಡ್ತೀರ್ ಸಂಸಾರಾಂತ
ಚಿಕ್ಕಂದ್ನಲ್ ನಾವ್ ಆಟಗೊಳ್ ಆಡಿದ್
ನಿಂಗ್ ನೆಪ್ಪೈತ ನಂಜಿ? ೧

ರತ್ನ ನಂಜಿ ಗಂಡ ಯೆಡ್ತಿ
ಅಂತ ಕೇರೀವ್ರ್ ಗೇಲೀನ್ ಇಡ್ತಿ
ನಾಚ್ಕೊಂಡ್ ಮನೆಯಾಗ್ ಔತ್ಕೊಂಡಿದ್ದು
ನಿಂಗ್ ನೆಪ್ಪೈತ ನಂಜಿ?
ಲಗ್ನಕ್ ಮುಂಚೆ ತೋಟಕ್ ಓಗಿ
ಊವ ಕಿತ್ತಿ ನಿಂಗೆ ಕೂಗಿ
ನನ್ ನಂಜೀಂತ ನಾ ಮುಡಿಸಿದ್ದು
ನಿಂಗ್ ನೆಪ್ಪೈತ ನಂಜಿ? ೨

ಲಗ್ನದ್ ದಿವಸ ನಿನ್ ಮೊಕ್ ನಾನು
ಬಂಡಾರಾನ ಅಣೆ ತುಂಬಾನು
ಬಳದಿ ಕನಡಿ ತೋರ್ಸಿದ್ ನಿಂಗೆ
ನಿಂಗ್ ನೆಪ್ಪೈತ ನಂಜಿ?
ನೀ ಮನೆಗ್ ಒಸದಾಗ್ ಬಂದೋಳಂತ
ನಿನ್ ಮೊಕಾನೆ ನೋಡಿಗ್ಕೊಂತ
ಆವೊತ್ ಚಾಕ್ರೀಗ್ ಓಗ್ನೇಸಿಲ್ಲ
ನಿಂಗ್ ನೆಪ್ಪೈತ ನಂಜಿ? ೩

ವೊಸದಾಗ್ ಇಬ್ರೆ ಸಂಸಾರ್ ಊಡಿ
ಯೆಸರು ಪಾಯುಸ ಊಟಾ ಮಾಡಿ
ನೆನೆದರ್ ನನಗೇ ನೆಗ ಬರತ್ತೈತೆ—
ನಿಂಗ್ ನೆಪ್ಪೈತ ನಂಜಿ ?
'ಇದ್ದಿದ್ ದಿವಸ ಯೆಸರು ಯಿಟ್ಟು
ಇಲ್ದಿದ್ರ್ ಒಟ್ಟೇಗ್ ಬಟ್ಟೇನ್ ಕಟ್ಟು'
ಅಂತ್ ಆಯಾಗಿ ಬದುಕೋಣಾಂದೊ
ನಿಂಗ್ ನೆಪ್ಪೈತ ನಂಜಿ ? ೪



ಮನೆಯಾಗ್ ಒಂದ್ ದಿನ ತಿನ್ನಾಕ್ ಇಲ್ದೆ
ನನಗ್ ಇಲ್ಲಾಂತ ನೀನೂ ಒಲ್ದೆ
ಕರೆದೋರ್ ಅಟ್ಟೇಗ್ ಓಗೋಲ್ಲೇಂದದ್
ನಿಂಗ್ ನೆಪ್ಪೈತ ನಂಜಿ?

ಆವೊತ್ತಿಲ್ಲ ಯಿಟ್ಟೀ ಇಲ್ದೆ
ಸಾಯ್ತಿದ್ರೂನೆ ನೆಗತ ಸೋಲ್ದೆ
'ಬದಕೋದ್ ತಿನ್ನಾಕ್ ಅಲ್ಲಾ'ಂತ್ ಅಂದದ್
ನಿಂಗ್ ನೆಪ್ಪೈತ ನಂಜಿ? ೫

ಕಷ್ಟ ಸುಕ ಏನ್ ಬಂದ್ರೂನೆ
ನಿಂಗೆ ನಾನೆ ನಂಗೆ ನೀನೆ
ಮುಳುಗೋನ್ ಬೆನ್ನಿನ್ ಬೆಂಡಿದ್ದಂಗೆ
ನಿಂಗ್ ನೆಪ್ಪಿರಲಿ ನಂಜಿ!
ಬಟ್ಟೆ ಒಟ್ಟೀಗ್ ಇಲ್ದಿದ್ರೂನೆ
ನಂ ನಂ ಪ್ರೀತಿ ಇರೊವರ್ಗೂನೆ
ದೇಅ ಓದ್ರು ಮನಸೋಗಾಲ್ಲ—
ನಿಂಗ್ ನೆಪ್ಪಿರಲಿ ನಂಜಿ! ೬

---

## ೪೨. ನಂಜೀ ಯೆಸರು

ಸಂಜೇಲ್ ಓ ಲಸ್ಮಣಾಂತ್ ಏಳಿ
ಅಟ್ಟೀಗ್ ಬಂದ್ರೆ ಬೇಗ
ದಾರೀನ್ ನೋಡ್ತ ನಿಂತ್ಕೊಂಡೌಳೆ
ನಂಜಿ ಬಾಗಿಲ್ನಾಗ! ೧

ಜೀತಕ್ ಜೀವ ಬಲಿ ಕೊಟ್ಮೇಲೆ
ನಂಜೀನೆ ಒಸ್ ಪ್ರಾಣ !
ನಂಜೀನ್ ಏನ್ರ ನೆಸಿದೆ ಓದ್ರೆ
ಉಡಗೋಗ್ತೈತೆ ತ್ರಾಣ ! ೨

ಜೀವಾನ್ ಬೆಳಸೋಕ್ ತಾಕತ್ ಅಂದ್ರೆ
ನಂಜೀ ನಾಮುಸ್ಮರಣೆ !
ಜೀವದ ಗಂಗೆ ಕೆಡದಂಗ್ ಇಡೋಕ್
ನಂಜೀನ್ ಎಸರೆ ಬರಣೆ ! ೩

---

## ೪೩. ಕಣ್ಣು

ಮೊಕ್ಕ್ ಎಳ್ಡು ಕಣ್ಣಾದ್ರೆ ಮನಸೀಗೆ ಒಂದೆ!
ಮನಸೀನ್ ಒಂದರ್ ಮುಂದೆ ಎಳ್ಡೂನೆ ಬಂದೆ!
ಇಲ್ದಿದ್ರೂ ಚೆಂದೆ!
ಲೋಕಾನ್ ವುಟ್ಟಸ್ತಿದ್ರೆ ಮನಸೀನ್ ಒಂದ್ ಕಣ್ಣು
ಲೋಕಾನ್ ಆಳ್ಮಾಡ್ತೈತೆ ಒರಗಿನ್ ಎಳ್ಡ್ ಕಣ್ಣು !
ಮೊಕದಾಗೀನ್ ವುಣ್ಣು ! ೧

'ಸಿಕ್ಟಂಗ್ ಒರ್ಣಿಸ್ತಾರ ಈ ಕುಡದೋನ್ ಎಣ್ಣ ?
ಯೋಳಾಕ್ ಏನಂತೀಗ? ಬರಿ ಮಾತಿನ್ ಬಣ್ಣ !'
ಅನ್ನೋನ್ ಕಣ್ ಸಣ್ಣ !
ನೀ ಸಿಗಿಯೋ ಕಬ್ಬನಕ ಮುಕ್ಕಾಲ್ವ ಮಣ್ಣ ?
ನಡವೆ 'ಥು' ಅಂತಾಚೆ ಉಗದಾಕ್ಸ್ನ ಗಿಣ್ಣ
ಕಬ್ ಸೀ ಅಲ್ವಾಣ್ಣ ? ೨

ಸರಿಯಾಗಿ ನೋಡ್ಬೇಕು ಅಂತಂದ್ರೆ ಯೆಣ್ಗೆ
ರೆಪ್ಪೇ ಪರದೇನಾಕಿ ಮುಚ್ಬೇಕು ಕಣ್ಗೆ !
ಒರಗಿನ್ ನಿನ್ ಕಣ್ಗೆ !
ಮನಸೀನ ಕಣ್ಮುಂದೆ ಔಳ್ ಅರ್ತ ಪೂರ್ತಿ !
ಮನದ ಕಣ್ಗ್ ಅಂದ್ರ್ ಔಳೆ ಆರಾದ್ಯಮೂರ್ತಿ !
ಅದಕೆ ಮನಕ್ಕ್ ಅರ್ತಿ ! ೩

---

## ೪೪. ನನ್ ಪುಟ್ನಂಜಿ ನಕ್ರೆ

ಮೂಗ ಆದಂಗ್ ಆಗ್ತೀನ್ ನಾನು
ನನ್ ಪುಟ್ನಂಜಿ ನಕ್ರೆ !
ಆಡಬೇಕಂದ್ರೆ ಮಾತೇ ಸಿಕ್ದು
ಉಕ್ ಬರ್ತಿದ್ರೆ ಅಕ್ರೆ—
ನನ್ ಪುಟ್ನಂಜಿ ನಕ್ರೆ ! ೧

ಲಕ್ಕಂತ್ ಮುತ್ತ್ ನಂಗ್ ಅತ್ಕೋಂತೈತೆ
ನನ್ ಪುಟ್ನಂಜಿ ನಕ್ರೆ !
ಝುಮ್ಮಂತ್ ಇಗ್ತ ಪದವಾಡ್ತೀನಿ
ಆ ಮುತ್ತ್ ನನಗಾಗ್ ಮಿಕ್ರೆ—
ನನ್ ಪುಟ್ನಂಜಿ ನಕ್ರೆ ! ೨

ಆಡೋಕ್ ಅಳತೆ ಗಿಳತೆ ಇಲ್ಲ
ನನ್ ಪುಟ್ನಂಜಿ ನಕ್ರೆ !
ಮಾನ ಗ್ನಾನ ಎಲ್ಲಾನೂನೆ
ತಿನ್ನೋದೊಂದೆ—ಠೋಕ್ರೆ !
ನನ್ ಪುಟ್ನಂಜಿ ನಕ್ರೆ ! ೩

ಆರಳ್ತ ವೊರಳ್ತ ಕಣ್ಣಿನ್ ಬೆಳಕು—
ನನ್ ಪುಟ್ನಂಜಿ ನಕ್ರೆ !
ಎಂಗಿರತ್ತೈತೆ ಮಲ್ಗೆ ವೂನಾಗ್
ತಿಂಗಳ್ ಬೆಳಕು ವೊಕ್ರೆ—
ಅಂಗೈತ್ ನಂಜಿ ನಕ್ರೆ ! ೪

ಫಳ್ಳಂತ್ ಅಲ್ಲಿನ್ ಬೆಳಕ್ ಉಕ್ತೈತೆ
ನನ್ ಪುಟ್ನಂಜಿ ನಕ್ರೆ !
ರೆಕ್ಕೆ ಬಿಳುಪನ್ ತೆಗದ್ ಎರಚ್ದಂಗೆ
ಸಾನ ಮಾಡಿದ್ ಕೊಕ್ರೆ
ನನ್ ಪುಟ್ನಂಜಿ ನಕ್ರೆ ! ೫

ನಾರದನ್ ಯೀಣೆ ನಿಲ್ಲಾಕಿಲ್ಲ
ನನ್ ಪುಟ್ನಂಜಿ ನಕ್ರೆ !
ತುಂಬ್ರ ತನ್ ಆಡ್ ಅಡಗಿಸ್ತಾನೆ
ನನ್ ಪುಟ್ನಂಜಿ ನಕ್ರೆ !
ವಜ್ರದ್ ಮುಂದಾ ಬಕ್ರೆ ! ೬

ಲೋಕಾನೇನೆ ಮೆಚ್ಕೊಂತೈತೆ
ನನ್ ಪುಟ್ನಂಜಿ ನಕ್ರೆ !
ಮೆಚ್ಕೊಂಡ್ ಯೋಳ್ತೈತ್: 'ನಂಜಿ ನಕ್ಕಾಗ್
ಸದ್ ಮಾಡೋನ್ಗೆ ಥೂಕ್ರೆ !'
ನನ್ ಪುಟ್ನಂಜಿ ನಕ್ರೆ ! ೭

ಕದಲಾಕ್ ಆಗ್ದು ಕಟ್ಟಾಕ್ದಂಗೆ
ನನ್ ಪುಟ್ನಂಜಿ ನಕ್ರೆ!
ಚಾಕ್ರಿ ಗೀಕ್ರಿ ಎಲ್ಲಾಕೂನೆ
ಆವೊತ್ತೆಲ್ಲ ಚಕ್ರೇ—
ನನ್ ಪುಟ್ನಂಜಿ ನಕ್ರೆ! ೮

ಯಿಂಗಿಂಗೇಂತ ಯೋಳಾಕ್ ಆಗ್ದು
ನನ್ ಪುಟ್ನಂಜಿ ನಕ್ರೆ!
'ಸೀ' ಅನ್ನಾದು ಸಬ್ದ ಮಾತ್ರ!
ತಿಂದ್ ನೋಡ್ಬೇಕು ಸಕ್ರೆ!
ನೋಡ್ಬೇಕ್ ನಂಜಿ ನಕ್ರೆ! ೯

---

## ೪೫. ನಂಜೀ ಗುಮಾನಿ

ನಾನ್ ಇನ್ನಾರ್ಗೋ ನೋಡ್ದೇಂತ್ ಯೋಳಿ
ಇಲ್ದಿದ್ ಅತ್ತೀನ್ ಇಂಜಿ
ಸಿಕದಿದ್ ಬಿತ್ತಾನ್ ಎತ್ತೋಕ್ ನೋಡಿ
ರಾಂಗ್ ಮಾಡ್ಬಾರ್ದು ನಂಜಿ. ೧

ನಿದ್ದೇಲ್ ಇಡ್ಡಿ ನನ್ ಎಬ್ಬಿಸ್ತ
'ನಿನ್ ಎಸರೇನ್?' ಅಂತನ್ನು—
'ಪುಟ್ನಂಜಿ' ಅಂತನ್ದೆ ಓದ್ರೆ
ಮಾತಿನ್ ಮುಯ್ಗೆ ತೊನ್ನು! ೨

ಪಕ್ಕದ ಮುತ್ತಿನ್ ಕಂಬದ ಮುಂದಾ
ಇಲ್ದಿದ್ ಯೆಂಚಿಕಡ್ಡಿ!
ನಿನಗದನೂನೆ ನಾನೇಳಾನೆ!
ಯಾಕಿಂಗಾದೆ ಮಡ್ಡಿ? ೩

'ಬಲಗೈ ಇದ್ದೂ ಇಲ್ದಂಗೇನೆ!'
ಅಂತ್ ಯೋಳ್ದಂದೆ ಎಡಚ—
ಪ್ರೀತೀ ಪಟ್ಗೆ ಸಿಕ್ಕೊಂಡೋರ್ಗೆ
ಗ್ನಾನಿದ್ರೂನೆ ಪಡಚ! ೪

ಆಳ್ ಗುಮಾನಿ ಅಂದ್ರೆ—ಆವ್ನಿ
ಅನಾಮತ್ತಾಗ್ ಎಲ್ಲ!
ನಂಗೇ ನಾವೇ ಮುರಕೋಬಾರ್ದು
ಅಗಿಯಾಕ್ ಇರೋ ಅಲ್ಲ! ೫

ಈಚೆ ಪಕ್ದಾಗ್ ಅಕ್ಸ್ಬ್ರನೂನೆ
ಆಚೆ ಮನಸನ್ ಬುಳ್ದಿ
ರೂಪಾಯ್ಗೆ ಇದ್ದಂಗ್ ಗುಮಾನಿಗೂನೆ
ಆಚೆ ಈಚೆ ಎಳ್ದಿ! ೬

ಈ ಗುಮಾನೀನೇ ನಾವ್ ಪ್ರೀತೀಗ್
ಕಟ್ಟೋ ಚಕ್ಕರ್ ಬಡ್ಡಿ!
ಈ ಗುಮಾನೀನೇ ನಂ ಪ್ರೀತೀನ್
ಅಳೆಯೋಕ್ ಅಳತೇ ಕಡ್ಡಿ! ೭

## ೪೬. ಕಾರಣ

ಕೆಂಪಿನ್ ಬಟ್ಟೆ ಕಾಣ್ದೆ ಓದ್ರೆ
ಗೂಳೀಗ್ ರಕ್ತ ಕುದಿಯಾಲ್ಲ!
ಸುಂಕೆ ಕುದಿಯಾಲ್ಲ!
ನಂಜಿ ರತ್ನಂಗ್ ಒದ್ರೆ ಕಾರಣ
ಗೀರಣ ಯೋಳ್ಕೊಂಡ್ ಒದಿಯಾಲ್ಲ!
ಇದಕೇಂತ್ ಒದಿಯಾಲ್ಲ! ೧

ರಾಗ ಆಕ್ತ ರಾತ್ರಿ ಬರದೆ
ಸುಂಕೆ ಮಲ್ಗೆ ಅರಳಾಲ್ಲ!
ಅಗಲಲ್ ಅರಳಾಲ್ಲ!
ರತ್ನನ್ ಆಳ್ತ ಮುತ್ನಲ್ ಊಳ್ತ
ನಂಜಿ ಇದಕೇಂತ್ ಯೋಳಾಲ್ಲ!
ರತ್ನ ಕೇಳಾಲ್ಲ! ೨

ನಂಜಿ! ನೀ ನಂಗ್ ಒದ್ರೂ ಬಿದ್ರೂ
ಕಾರಣ ನಿಂಗೇನ್ ಬೇಕಿಲ್ಲ!
ನಂಗೂ ಬೇಕಿಲ್ಲ!
ಕಾರಣ ಗೀರಣ ಎಲ್ಲಾ ಐತೆ—
ಕಣ್ಗೆ ಕಂಡ್ರೂ ಕಾಣಾಲ್ಲ!
ಕೇಳೋದ್ ಜಾಣಲ್ಲ! ೩

———

## ೪೭. ನಂ ನಂ ಮಾತು

ಪುಟ್ನಂಜಿ ! ಬಿರ್ಬಿರ್ನೆ ಬಾಗಿಲ್ನ ತೆರದಿಕ್ಕು
ಬೇವಾರ್ಸಿ ಬಂದೌನೆ ಕಾಯ್ತೌನೆ— ತಡವಾದ್ರೆ
ಗಾಳ್ಯಾಗಿ ಬಂದು ಬಡದೇನು. ೧

ನನ್ ರತ್ನ ! ನೀ ಬಂದು ಬಡಿಗಿಡಿಯೋದ್ ಎಲ್ಬಂತು ?
ಗಾಳ್ಯಾಗಿ ನೀ ಬಂದ್ರೆ ನನಗೇನು—ನಾನೊಂದು
ಮಿೂನಾಗಿ ಪೊಳೆಯಾಗ ಮುಳುಗೇನು. ೨

ಮಿೂನಾಗಿ ನೀ ನೀರ್ಗೆ ಪೋಚ್‌ಗೀಚ್ಕೊಂಡ್ರೇನಂತೆ
ನಿನ್ಗೆ ನಾ ಸುಂಸುಂಕೆ ಬಿಟ್ಟೇನ—ಬೆಸ್ತ್ರೋವ
ನಾನಾಗಿ ಬಂದು ನಿಂಗ್ ಇಡದೇನು. ೩

ಮಿೂನನಿಡಿಯಲು ನೀನು ಬೆಸ್ತನಾದ್ರೆ ಏನೀಗ
ಮೋಡ್ವಾಗಿ ನಾನ್ ಆರಿ ಪೋಗೇನು—ಆಕಾಸ
ದಲ್ಲಿಲ್ಲ ಮೆಲ್ಮೆಲ್ನೆ ಜಾರೇನು. ೪

ಮೋಡ್ವಾಗಿ ಮೇಗಡೇ ಮೆಲ್ಮೆಲ್ನೆ ನೀ ಪೋಗು
ಅನಿಮುಳೆ ರೂಪಾವ ತಾಳೇನು—ನಾ ಬಂದು
ನಿನ್ ಜೊತೆಗೆ ಆಯಾಗಿ ಬಾಳೇನು. ೫

ಅನಿಮುಳೆ ನೀನಾಗಿ ನನ್ನೇನ್ರ ಮುಟ್ಟಂದ್ರೆ
ಬೂಮಿಾಲಿ ಆಸರುಲ್ಲು ಆದೇನು—ವುಲ್ಲಾಗಿ
ನಿನ್ ಮರ್ತ್ತು ಪೊರ್ವಾಗಿ ಬೆಳದೇನು ೬

ನೀನ್ ಅಸರು ವುಲ್ಲಾಗಿ ಬೆಳೆದು ಬಾ ಬೇಬೇಗ
ಕುರಿಯಾಗಿ ಆರಾರ್ತ ಬಂದೇನು—ನಿನ್ ತಬ್ಬಿ
ಮುತ್ತಿಕ್ಕಿ ಮುಕ್ಕಿ ನಾ ಮುಗಿಸೇನು. ೭

ಕುರಿಯಾಗಿ ನೀ ಬಂದು ವುಲ್ಲ ಮುಕ್ಕೋದಾದ್ರೆ
ವೊಲಿಯೋವ ಸೂಜಿ ನಾನ್ ಆದೇನು—ಚಿಪ್ಪಿಗನ
ಬಟ್ಟೇಲಿ ವೊಕ್ಕು ನಾ ನಡದೇನು. ೮

ಸೂಜಾಗಿ ಚಿಪ್ಪಿಗನ ಬಟ್ಟೇಲಿ ನೀನೋದ್ರೆ
ದಾರಾದ ಬದಕ ನಾನ್ ಇಡದೇನು—ನೆಗ ನೆಗ್ತ
ಸೂಜೀಯ ಯಿಂದೇನೆ ಬಂದೇನು. ೯

---

## ೪೮. ಮನಸು—ಮೆಯ್ಯಿ

ಕಣಜ ಕಾಳು ಎಳ್ಡೂ ಕೂಡ್ದಾಗ್
ಅಲ್ವ ಆಕೋದ್ ಬರ್ತಿ ?
ಮನಸು ಮೆಯ್ಯಿ ಎಳ್ಡೂ ಸೇರ್ಕೊಂಡ್ರೆ
ಆಗ್ಲೇ ಪ್ರೀತಿ ಪೂರ್ತಿ ! ೧

ಮನಸು ಮೆಯ್ಯಿ ಮುತ್ಕೊಟ್ಟಂಗಿತ್ !
ಸೌಂದ್ರ ಆರ್ದ ಮೂರ್ತಿ !
ಒಂದಿದ್ರೆ ಇನ್ನೊಂದ್ ಇಲ್ದಿದ್ರಂದ್ರೆ—
ಬಂಡಿ ಇಲ್ಲದ್ ಸಾರ್ತಿ ! ೨

ಮುತ್ತ್ ಕೊಟ್ಟಂಗ್ ಆ ಮನಸೂ ಮೆಯ್ಯೂ
ಲಗತ್ತಾಗ್ ಇಲ್ದಿದ್ರ್ ಎಕ್ಕ !
ಯಾವ್ದೊಂದ್ ಇಲ್ದಿದ್ರೂನೆ ಮಿಕ್ಕಿದ್
ಇದ್ದೂ ಇಲ್ಲದ್ ಲೆಕ್ಕ ! ೩

---

## ೪೯. ರತ್ನ

ದಾರೀಲ್ ಆರೆ ಗುದ್ಲಿ ಯಿಡ್ಡ
ರತ್ನ ಆಳ್ಳ ತೋಡ್ತಾನೆ
ಮೇಸ್ತ್ರಿ ನೋಡ್ತಾನೆ;
ತೋಡ್ತಿದ್ದಂಗೆ ಏನೋ ನೋಡ್ತ
ಆರೇ ವೂರಿ ನಿಲ್ತಾನೆ!
ಬೆಪ್ಪಂಗ್ ನಿಲ್ತಾನೆ! ೧

ಎದುರಿನ್ ಬೇಲೀಲ್ ಬಿಟ್ಟಿದ್ ಊವು
ರತ್ನನ್ ಕಣ್ಗೆ ಬೀಳ್ತಾದೆ
ನೆಪ್ಗೊಳ್ ಏಳ್ತಾದೆ;
ಊವಿನ್ ಮುಡಿದಿದ್ ನಂಜೀ ಬೊಂಬೆ
ಕಣ್ಣಿನ್ ಮುಂದೆ ಯೋಳ್ತಾದೆ
ಆಸೆ ಕೆಳ್ತಾದೆ. ೨

ಯಿಡಿದಿದ್ ಆರೇನ್ ಅಂಗೇ ಬುಟ್ಟೆ
ರತ್ನ ಕುಡಿದಂಗ್ ಓಗ್ತಾನೆ
ಮೇಸ್ತ್ರಿ ಕೂಗ್ತಾನೆ ;
ಮನೆಗೋಗೋನ್ಗೆ 'ಲೋ' ಅಂತಂದಿ
ಕೂಗ್ತ ಲಾಗ ಆಕ್ತಾನೆ !
ಕೂದ್ರೆ ಕೂಗ್ತಾನೆ! ೩

ಅಟ್ಟೇಲ್ ಕಾಡಿಗೆ ಕಣ್ಣಿನ್ ನಂಜಿ
ರತ್ನನ್ ಕಂಡಿ ಉಕ್ತಾಳೆ
ಕಣ್ಣಲ್ ಮುಕ್ತಾಳೆ ;
ನಿಂತಿದ್ ನಂಜೀನ್ ನೋಡ್ತಿದ್ದಂಗೇ
ಇಬ್ಬರ್ ಮನಸೂ ಯಿಗ್ತಾದೆ
ಎಳ್ಡ್ ಒಂದಾಗ್ತದೆ! ೪

---

## ೫೦. ಗೋರಿ

ನನ್ ಪುಟ್ನಂಜೀನ್ ಯೆಂಡಾ ಬುಟ್ಟು
ಕಣ್ತುಂಬಾನು ಕುಡದೆ.
ಪದಗೊಳ್ ಆಡೋದ್ ಯೆಂಗೇಂತೇಳಿ
ಔಳ್ನೇ ಪಟ್ಟಾಗಿಡದೆ. ೧

ಮೂರೊತ್ತೂನೆ ನಂಜೀಂತಂದಿ
ಔಳಾಡೇ ನಂಗ್ ಮುಗ್ಲು.
ನಂಜಿ ವೋದ್ರೂ ನೆಪ್ ಓಗ್ನಿಲ್ಲ.
ನೆಪ್ ಆಡಿಸ್ತೈತ್ ಈಗ್ಲು. ೨

ವಸ್ತು ವೋದ್ರೆ ನೆಳ್ಳೂನೂನೆ
ಜೊತೆಯಾಗ್ ವೋಗೋದ್ ತತ್ವ.
ನಂಜಿ ವೋಗಿ ನೆಪ್ಪುಳಿಯಾದು
ನನ್ ಪುಟ್ನಂಜಿ ಮಾತ್ರ. ೩

ಯಿಂದೆ ನಾನ್ ಆಡ್ತಿದ್ದಿದ್ ಇದ್ದೋಳ್
ಬಾವ್ಕಕ್ಕೆ ಬತೇರಿ.
ಈಗ್ ನಾನ್ ಆಡ್ತಾನಿತ್ತಂದ್ರದೇ
ಇಲ್ದೋಳ್ ನೆಪ್ಪಿಗ್ ಗೋರಿ. ೪

---

## ೫೧. ರತ್ನ ಬೇವಾರ್ಸಿ

ಐನೋರ್ ವೊಲದಲ್ ಚಾಕ್ರಿ ಮಾಡ್ತ
ಸಂಜಿ ಆಯ್ತಂದ್ರೆ
ಚಿಂತಿ ಮಾಡ್ತೀನ್—ಯೆಂಗಿರತ್ತೈತೆ
ನಂಜಿ ಎದ್ಬಂದ್ರೆ. ೧

ನಂಜಿ ನೆಪ್ಪಾಯ್ತು! ಆದಿ ಗಿಡದಾಗ್
ಊವಾ ಜಲ್ಜಲ್ಡಿ
ಕೂದಂಗೆಲ್ಲ ಯೆಚ್ಕೋಂತೈತೆ
ಆಸೆ ಬಲೆ ಬಲ್ಡಿ. ೨

ಊವಾ ಕೂದ್ರಾ ಸಂತೋಸಾನಾ
ಅದನ್ ಎಲ್ ಇಡಿಸೋನೆ?
ಚಿಂತಿಸ್ತಾ ನಿಂತ್ಕೋಂತೀನ್: 'ಅಯ್ಯೊ!
ಯಾರಿಗ್ ಮುಡಿಸೋನೆ?' ೩

ನಾನ್ ಯೆಂಗ್ ಓಯ್ತ್ರೋನ್ ಅದೆ ಗೊತ್ತಿಲ್ಡೆ
ನಿಂತಿದ್ದಂಗೇನೆ
ನಡಿತಾನಿದ್ರೆ ಬತ್ತ್ರೀನ್ ನಾ ನಂ
ಗುಡಿಸಿಲ್ ತಾಕೇನೆ. ೪

ಗುಡಿಸಿಲ್ ಬೀಗ ತುಕ್ಕ್ ಇಡದೈತೆ
ನಂಜಿ ಅಲ್ಲಿಲ್ಲ!
ಕಣ್ಣೀರ್ ತುಂಬ್ಕೊಂಡ್ ನೋಡ್ತೀನಾಗ
ಮನೆ ಮೇಲ್ ಮಳೆ ಬಿಲ್ಲ! ೫

ಗುಡಿಸಿಲ್ ಬಾಗಿಲ್ ಬೀಗದಂಗೇನೆ
ಮನಸಿನ್ ರಾಗಾನು.
'ನಂಜಿ ಇಲ್ಲದ್ ಮನೆಗ್ ಯಾಕ್ಬರ್ತಿ?'
ಅಂತೈತ್ ಬೀಗಾನು! ೬

ರತ್ನನ್ ನಂಜೀಗ್ ಮುಡಿಸ್ಬೇಕಂತ
ತಂದಿದ್ ಊನೆಲ್ಲ
ನಾವಿದ್ ಗುಡಿಸಿಲ್ ಮುಂದಿಕ್ತೀನಿ—
ಬೇರೆ ತಾವಿಲ್ಲ. ೭

ಇಂಗ್ ಊ ಮುಡಿಸಿ ವೋಯ್ತಾನಂಗೇ
ಬಕ್ಕೊಂಡ್ ಮೊಕ ಮರಸಿ.
ನಾನ್ ಎಂಗ್ ಓದ್ರೆ ತಾನೇ ಏನು?
ರತ್ನ ಬೇವಾರ್ಸಿ! ೮

---

## ೩೨. ನಂಜೀಗೆ

ನೀ ನನ್ ಅಟ್ಟೀಗ್ ಬೆಳಕಂಗ್ ಇದ್ದೆ ನಂಜು!
ಮಾಗೀಲ್ ಉಲ್ಮೇಲ್ ಮಲಗಿದ್ದಂಗೆ ಮಂಜು!
ಮಾಗಿ ಕುಗ್ತು!
ಬೇಸ್ಗೆ ನುಗ್ತು!
ಇದ್ಕಿದ್ದಂಗೆ ಮಾಯವಾಗೋಯ್ತು ಮಂಜು!
ನಂಗೂ ನಿಂಗೂ ಯೆಂಗ್ ಆಗಲೋಯ್ತು ನಂಜು!

ಸೀರಂಗ್ಪಟ್ಣದ್ ತಾವ್ ಕಾವೇರಿ ಒಡದಿ
ಯೆಳ್ಡೋಳಾಗಿ ಪಟ್ಣದ್ ಸುತ್ತ ನಡದಿ
ಸಂಗಂದಲ್ಲಿ
ಸೇರ್ಕೊಂಡ್ ಮಳ್ಳಿ
ಮುಂದಕ್ ವೋದ್ದು ನಮಗೆ ಗ್ನಾನದ್ ಪಂಜು !
ಈಗ್ ಅಗಲಿದ್ರೇನ್ ಮುಂದ್ ನಾವ್ ಸೇರ್ತೀವ್ ನಂಜು ! ೧

ಅಗಲೋಡೋಗ್ತೆ ರಾತ್ರಿ ಬಂತಂತ್ ಅಂಜಿ !
ರಾತ್ರಿ ಮುಗದೋದ್ರ್ ಅಗಲೆ ಅಲ್ವ ನಂಜಿ ?
ರಾತ್ರಿ ಬಿತ್ತು !
ಅಗಲೇ ಬತ್ತು !
ಓಗೋದ್ ಮಳ್ಳಿ ಬರೋದ್ಕೆ ಅಲ್ವ ನಂಜಿ ?
ಆ ನೆಮ್ಕೆ ನನ್ ಜೀವಾನ್ ಉಳಸೊ ಗಂಜಿ ! ೨

---

# ರುಸ್ತುಂ ರತ್ನ

---

## ೫೩. ಮಡಿಕೇರೀಲಿ ರತ್ನ

ಮಡಿಕೇರೀಲಿ ರತ್ನ
ಕಂಡಾ ವೊಸಾ ಮತ್ನ. ೧

‘ಮಡಿಕೇರೀಲಿ ಮಡಿಕೆ ಯೆಂಡ
ಯೀರ್ದಿದ್ರ್ ಅಲ್ಲೀಗ್ ವೋದ್ರೂ ದಂಡ’
ಅಂದಿ ರತ್ನ ಪಡಕಾನೇಗೆ
ವೊಂಟ, ಬೆಟ್ಟದ ನೆತ್ತಿ ಮೇಗೆ
ವೋಯ್ತಿದ್ದಂಗೆ ನಿಂತ!
ಕಲ್ಲಾದಂಗೆ ಕುಂತ! ೨

ಸುತ್ತ ಸಾಯೋ ಬಿಸಿಲಿನ್ ಚಾಪೆ!
ಅಲ್ಲಲ್ಲೆ ವೊಸಿ ನೆರಳಿನ್ ತೇಪೆ!
ಅಲೆಯುಲೆಯಾಗಿ ಬಿಸಿಲಿನ್ ಜೊತೆಗೆ
ಸುತ್ತಿನ್ ಗುಡ್ಡಗೊಳ್ ಕುಣದರ್ ಮೆತ್ಗೆ
ಮನಸೀಗ್ ಆರ್ಸ ತರ್ತ—
ರತ್ನ ಯೆಂಡ ಮರ್ತ! ೩

‘ ಮುದಕನ್ ಸಾವೇ ನೋಡಾಕ್ ಚಂದ ! ’
ಅಂದ್ರೆ ಸೂರ್ಯ ಸಾಯಾಲ್ಲೇಂದ ;
‘ ಸಾಯೋ ಮುದುಕ ಸಂಜೆ ಸೂರ್ಯ
ನೆಗತ ಸಿಲ್ಲೋಕ್ ಇನ್ನೇನ್ ಕಾರ್ಯ ? ’
ಅಂತ ಯಿಂದಕ್ ತಿರ್ಗಿ
ನೋಡ್ದೆ —ಬತ್ತು ಗಿರ್ಕಿ ! ೪

ದೇವರದೊಂದು ಚೆಂದದ್ ಸ್ತೋತ್ರ
ಕೊಡಗಿನ್ ಮೋಗಿನ್ ಒಂದ್ ನಕ್ಸತ್ರ
ಕೊಡಗಿನ್ ಒಂದ್ ಊ ಗಾಳೀಲ್ ತೇಲ್ತ
ಬಂದಂಗಿದ್ಲು ಅತ್ರ ಕಾಲ್ತಾವ್
ಒಂದು ಕೊಡಗೀನುಡಗಿ !
ಐದಾರೊರಸದ್ ವುಡಗಿ ! ೫

ಕೊಡಗಿನ್ ತೋಟದ್ ಕಾಪೀ ಅಣ್ಣು
ತುಟಿಗೊಳ್ ! ಇಳ್ಳಿನ್ ಬೆಳಕೆ ಕಣ್ಣು !
ಕೆನ್ನೆ ಆನಕ ಕೊಡಗಿನ್ ಕಿತ್ಲೆ !
ಔಳೀಳಿದ್ಲು ನಾ ಕೇಳೂತ್ಲೆ :
‘ ನಿಂಗೆ ಯೆಸರೇನಮ್ಮ ? ’
‘ ನನ್ನೆಸರು ಪೂವಮ್ಮ ! ’ ೬

‘ ಪೂವಮ್ಮ ! ’ ಹಾ ! ಯೆಂತಾ ಯೆಸರು !
ಕಣ್ಣಿಗ್ ಚಿತ್ರ ಕಟ್ಟೋ ಯೆಸರು !
ರೂಪು ರಾಗಕ್ ತಕ್ಕಂತ್ ಯೆಸರು !

ಯೆಂಗ್ ನೋಡಿದ್ರು ವೊಪ್ಪೋ ಯೆಸರು !
' ಪೂವಮ್ಮಾ ! ಪೂವಮ್ಮಾ ! '
' ಪೂವಮ್ಮಾ ! ಪೂವಮ್ಮಾ !' ೭

ಔಳ್ ನೋಡೂತ್ಲೆ ನಂಗ್ ಮತ್ತಾಯ್ತು !
ಔಳ್ ಮಾತ್ಕೇಳಿ ಒಂದ್ ಅತ್ತಾಯ್ತು !
ಔಳ್ ಮಾತ್ ಇನ್ನಾ ಕೇಳ್ಬೇಕೂಂತ
' ನಾನ್ಯಾರ್ ಗೊತ್ತೆ ? ' ಅಂದ್ರೆ 'ಹ್ಞೂ'ತ
' ನೀ ಯೆಂಡಕುಡಕ ' ಅಂದ್ಲು
ನೆಗ್ತ ಅತ್ರ ಬಂದ್ಲು. ೮

' ನೀ ನಾ ಕುಡಿಯೋದ್ನ ಎಲ್ ನೋಡ್ದೇಮ್ಮ? '
ಅಂದ್ರೆ, ' ಯಾವೋನ್ಗೈತೆ ಜಮ್ಮ
ಔನ್ಗೆ ಯೋಳ್ತಿವ್ ಕೊಡವಾಂತಂದಿ !
ಕುಡದಂಗ್ ಆಡೋನ್ ಕುಡುಕಾಂ'ತ್ ಅಂದಿ
ತೊಡೇನ್ ಅತ್ತಿದ್ಲು ಮೆಲ್ಗೆ !
ಕುಡದೋನ್ ಅಂದ್ರೆ ಸಲ್ಗೆ ! ೯

ಕತ್ತಿನ್ ಸುತ್ತ ಕೈ ಆಕ್ಕೊಂಡಿ
' ಅಣ್ಣ ರತ್ನ ' ಅಂತ್ ನೆಕ್ಕೊಂಡಿ
' ಯೆಂಡದ ಪದಗೊಳ್ ಏಳ್ ನೋಡಾನೆ !
ನಾನೂ ನಿನ್ನಂಗ್ ಕಲ್ತ್ ಆಡಾನೆ ! '
ಅಂದ್ಲು ಮೊಕಾನ್ ನೋಡಿ !
ಕಣ್ಣ ದೊಡ್ದುಮಾಡಿ ! ೧೦

ಇಲ್ದಿದ್ ತಂಗಿ ಆಗ್ ವುಟ್ಟಿದ್ಲು
ಪೂವಮ್ಮಾನೆ ನಂಗೆ ಮೊದಲು !
ತಂಗಿ ವುಟ್ಟಿದ್ ದಿವಸಾಂತೇಳಿ
ಆಡ್ದೆ ಯೆಂಗೀಸ್ ಇಡದಂಗ್ ತಾಲಿ —
ಸೂರ್ಯ ಮುಳಗಿದ್ ಕಾಣ್ದೆ !
ಯೆಂಡ ಬೇಕಂತ್ ಅನ್ದೆ !

---

## ೫೪. ಮಡಿಕೇರೀಲಿ ಮಂಜು

ಬೂಮೀನ್ ತಬ್ಬಿದ್ ಮೋಡ್ ಇದ್ದಂಗೆ
ಬೆಳ್ಳಿ ಬಳಿದಿದ್ ರೋಡ್ ಇದ್ದಂಗೆ
ಸಾಫಾಗ್ ಅಳ್ಳ ತಿಟ್ಟಲ್ದಂಗೆ
ಮಡಿಕೇರೀಲಿ ಮಂಜು !
ಮಡಗಿದ್ ಅಲ್ಲೀ ಮಡಗಿದ್ದಂಗೆ
ಲಂಗರ್ ಬಿದ್ದಿದ್ ಅಡಗಿದ್ದಂಗೆ
ಸೀತಕ್ ಸಕ್ತಿ ಉಡಗೋದಂಗೆ
ಅಳ್ಳಾಡಾಲ್ದು ಮಂಜು ! ೧

ತಾಯಿ ಮೊಗೀನ್ ಎತ್ಕೊಂಡಂಗೆ
ಒಂದಕ್ಕೊಂದು ಅತ್ಕೊಂಡಂಗೆ
ಮಡಿಕೇರೀನ ಎದೆಗೊತ್ಕೊಂಡಿ
ಜೂಗೀಡ್ಸ್ತಿತ್ತು ಮಂಜು !

ಮಲಗಾಕ್ ಸೊಳ್ಳೆ ಪರದೆ ಕಟ್ಟಿ
ಒದಿಯಾಕ್ ಒಗದಿದ್ ದುಪಟಿ ಕೊಟ್ಟಿ
ಪಕ್ದಾಗ್ ಗಂದದ್ ದೂಪ ಆಕ್ದಂಗ್
ಮಡಿಕೇರೀ ಮೇಲ್ ಮಂಜು! ೨

ಮಂಜಿನ ಮುಸಕಿನ್ ಕಾವಲ್ನಲ್ಲಿ
ಒಣಗಿದ್ ಉದ್ದಾನೆ ವುಲ್ನಲ್ಲಿ
ಒಳಗೇ ಏನೋ ಸರದೋದಂಗೆ
ಅಲಗಾಡ್ತಿತ್ತು ಮಂಜು!
ನಡಿಯೋ ದೊಡ್ಡೊಡ್ ದೇವಲ್ನಂಗೆ
ಪಟ್ಣದ್ ಸುತ್ತಿನ್ ಕಾವಲ್ನಂಗೆ
ಅಲ್ಲಲ್ಲೇನೆ ಅಂಗಂಗೇನೆ
ಗಸ್ತಾಕ್ತಿತ್ತು ಮಂಜು! ೩

ಸೂರ್ಯನ್ ಕರೆಯೋಕ್ ಬಂದ್ ನಿಂತೋರು
ಕೊಡಗೀನ್ ಎಲ್ಲಾ ಪೂವಮ್ನೋರು
ತೆಳ್ನೆ ಬೆಳ್ನೆ ಬಟ್ಟೇನಾಕಿ
ಬಂದಂಗಿತ್ತು ಮಂಜು!
ಚಿಮ್ತಾನಿದ್ರೆ ಎಳಬಿಸಿಲಿನ್ ಕೆಂಪು
ಮಂಜಿನ್ ಬಣ್ಣ ಕಣ್ಗೆ ತಂಪು!
ಕೊಡಗಿನ್ ಲಸ್ಮೀರ್ ಪೂವಮ್ನೋರ್ಗೆ
ಆಲಿನ್ ಸೌಂದ್ರೀ ಮಂಜು! ೪

ಅಗಲೇ ಬರಲಿ ರಾತ್ರೇ ಬರಲಿ
ಬಿಸಲು ನೆಳ್ಳು ಏನೇ ಇರಲಿ
ಕಣ್ಮರೆಯಾಗಾಕ್ ತಾವ್ ಕೊಡಾಲ್ದು
ಮಡಿಕೇರೀಗೆ ಮಂಜು !
ತೈಲ ನೀರಿನ್ ಮೇಗಿದ್ದಂಗೆ
ಪೂವಮ್ಮ—ನನ್ ತಂಗೀದ್ದಂಗೆ
ಬಿಟ್ಟೂ ಬಿಡದಂಗ್ ಇಡಕೋಂತಿತ್ತು
ಮಡಿಕೇರೀಗೆ ಮಂಜು ! ೫

---

## ೫೫. ರೆ

ನಾನ್ ಸಂಪಾದ್ಸಿದ್ ಬಿಡಕಾಸೆಲ್ಲ
ಬೆಳ್ಳಿ ರೂಪಾಯಾದ್ರೆ—
ಕೊಂಡ್ಕೊಳ್ಳೋದ್ ಒಂದ್ ಯೆಂಡದ್ಬುಂಡೆ
ನೂರಾರ್ ಬುಂಡೆ ಆದ್ರೆ— ೧

ಬಾಯಿ ವೊಟ್ಟೆ ಎಲ್ಲ ನಂಗೆ
ಎಚ್ಕೊಂಡ್ ಐನೂರಾದ್ರು —
ನನ್ ಜರ್ಬೇನು ! ನನ್ ಸೋಕೇನು !
ಆಗ್ ನನ್ ನೋಡಬೇಕಾದ್ರೆ! ೨

ಆಗೋಕಿಲ್ಲ ವೋಗೋಕಿಲ್ಲ
'ರೆ' ಪರ್ಪಂಚದ್ ಬಾಬ್ತು;
ಆದ್ರೂನೂನೆ 'ರೆ' ಅಂತಂದ್ರೆ
ಬಾಳ ಸುಕದ್ ಬಾಬ್ತು! ೩



6

ರೇನ್ನೊ ಕನಸಿನ್ ಪರ್ಪಂಚ್ದಲ್ಲಿ
ಬಾಳ್ ಸಂತೋಸಾಗ್ತೈತೆ !
ವುಲ್ಲಿನ್ ಕಂತೆ ವೊತ್ಕೊಂಡಂಗೆ
ಬದಕೋದ್ ಅಗರಾಗ್ತೈತೆ ! ೪

ಮುಳುಗೋ ಮನಸಂಗ್ ಒಳೆಯಾಗ್ ಒಂದು
ದೋಣಿ ಸಿಕ್ಕಿದ್ ರೀತಿ
ಸಂಕ್ಟ ಪಟ್ಕೊಂಡ್ ಸಾಯೋವನ್ಗೆ
ರೇಂದ್ರೆ ಬಲೆ ಪ್ರೀತಿ ! ೫

ರೇಂತ ರಾಗ ಎಳೆಯೋದೆಲ್ಲ
ನಡದ್ಬಡೋವಂಗಿದ್ರೆ—
ಬೆಟ್ಟ ಕುಟ್ಕೊಂಡ್ ಓಡೋಗ್ತೈತೆ
ಎಡದಾ ಕಾಲಿಂದ್ ಒದ್ರೆ! ೬

ರೇನ್ನೋದಾಗ್ಲಿ ಆಗ್ದೆ ವೋಗ್ಲಿ
ಅದರಿಂದ್ ಏನಾಗ್ಬೇಕು ?
'ರೆ' ಅಂತನ್ಕೊಂಡ್ ಕಸ್ಟಾನೆಲ್ಲ
ಮರೆಯೋದಸ್ಟೆ ಸಾಕು ! ೭

'ಆದ್ರೆ ಗೀದ್ರೆ' ಅನ್ಕೊಂಡಿದ್ರೆ
ಸುಕವಾಗಿರಬೌದಂದ್ರೆ—
ರೇನ್ನೊ ಆಕ್ಸ್ರಾ ಎಂತಾದ್ದಣ್ಣ!
ಆರೇ ರೇ ರೇ ರೇ ರೇ ! ೮

---

## ೫೬. ಚಿಂತೆ

ಆವೀಗ್ ಮುತ್ತ್ ಇಕ್ಕೋದು
ವುಲೀಗ್ ಆಲ್ ತಿಕ್ಕೋದು
ಚಿಂತೇಗ್ ಎದೇಲ್ ತಾವ್ ಕೊಡೋದು
ಎಲ್ಲಾ ಒಂದೇ ತೂಕ!
ಕೇಳ್ಲೆ ಬೇಡ ಬಾಕಿ! ೧

ಉಗನಿ ಅಬ್ಕೊಂಡಂಗೆ
ಕುಟ್ಟೆ ಯಿಡಕೊಂಡಂಗೆ
ಗೆದ್ದಿಲ್ನಂಗೆ ಅತ್ಕೊಂಡ್ ಬಂದಿ
ಮನಸನ್ ಮುರದ್ ಮುಕ್ಕೋಂತೆ
ದೊಡ್ಡೀ ಮಾರಿ—ಚಿಂತೆ! ೨

ಬೆಂಕಿ ಮೈಮೇಲ್ ಬಿದ್ರೆ
ನಾವ್ ಅದನ್ ಆರೀಸ್ಬಿದ್ರೆ
ಧಗ್ಗಂತ್ ಅತ್ಕೊಂಡ್ ಉರದಿ ನಮ್ನ
ಮಾಡತ್ತೈತ್ ಬೂದೀನಂತೆ!
ಬೆಂಕೀನೆ—ಈ ಚಿಂತೆ! ೩

ಚಿಂತೆ ಬರ್ತಿದ್ದಂಗೆ
ತಕ್ಕೋ! ದೊಡ್ಡು ವಂಗೆ!
ಚಿಂತೇಗೇನ್ರ ನೀ ಸರಣಾದ್ರೆ
ನಿಂಗೆ ಎಕ್ಕ ಗಟ್ಟೆ!
ಚಿಂತೇಗ್ ಊಟ ಬಿಟ್ಟೆ! ೪

ಚಿಂತೆ ಬರ್ತಿದ್ದಂಗೆ
ಗುರತೇ ಗೊತ್ತಾಗ್ದಂಗೆ
ಯಿಡಕೊಂಡ್ ಚೆನ್ನಾಗ್ ತದಕಾಕಿದ್ರು
ಕರದ್ರು ತಿರ್ಗಿ ಬರದು!
ಜಪ್ಪಯ್ಯಾಂದ್ರು ಬರದು! ೫

ಚಿಂತೇನ್ ಕಂಡೋರ್ ನಾವು!
ಚಿಂತೇಗ್ ಇಕ್ದೋರ್ ನಾವು!
ನಮ್ಮಂಗ್ ಸಲೀಸ್ ಆಗಬೇಕಂದ್ರೆ
ಚಿಂತೇನ್ ಇಡದಿ ಧಂಸ
ಮಾಡ್ಲೆಬೇಕು ಮನ್ಸ! ೬

---

## ೫೭. ಗ್ನಾನದ್ ದೀಪ

ಯೆಂಡ ಕುಡದೋನ್ ಕಂತೇಂತ್ ಯೋಳಿ
ನೆಗದೆ ಯೋಳಾದ್ ಕೇಳು;
ಒಂದ್ ದಿನಾರ ಸಾಜಾ ತಿಳಕೊ—
ಇದ್ದೇ ಇರತೈತ್ ಗೋಳು! ೧

ಬೀದಿ ದೀಪ ಇರತೈತ್ ಅಂಗೇ!
ಇರೋ ಜಾಗದಾಗೇನೆ;
ನಡಿತಾನಿದ್ರೆ ನೆಳ್ಳೊಂದ್ ಮಾತ್ರ
ಬತ್ತೈತ್ ಯಿಂದಾಗೇನೆ. ೨

ದೀಪದ್ ಬೆಳಕು ಬೇಕಂತ್ ಅಂದ್ರೆ
ಪೋಗ್ಬೇಕ್ ಅದರ್ ತಾಕೇನೆ!
ನೆಳ್ಳಿನ್ ಕತ್ಲೆ ಬೇಡಾಂತ್ ಅಂದ್ರು
ಬತ್ತೈತ್ ಯಿಂದಾಗೇನೆ. ೩

ಇದನ ಕಾಣ್ತಾ ಕಾಣ್ತಾ ನಂಗೆ
ನೆಪ್ಗೆ ಬಂದಂಗ್ ಆತು—
'ಬೆಳಕೆ ಗ್ನಾನ, ಕತ್ಲ್ ಅಗ್ನಾನ'
ಅನ್ನೋ ದೊಡ್ಡೋರ್ ಮಾತು! ೪

'ಗ್ನಾನಕ್ ಮನ್ಸ ಕಸ್ಟ ಬೀಳ್ಬೇಕು'
ಅನ್ನೋ ದೊಡ್ಡೋರ್ ಮಾತು,
'ಅಗ್ನಾನ್ಕೆ ಏನೂ ಬೇಡಾನ್ನೋ'ದು
ಸಾಜಾ ಆದಂಗಾತು! ೫

ದೀಪದ್ ತಾಕೆ ಬತ್ತಂದ್ರದೋ
ಕಾಲಿನ್ ಕೆಳಗೆ ನೆಳ್ಳು!
'ಅಗ್ನಾನೆಲ್ಲ ಗ್ನಾನಕ್ ಸರಣು'
ಅನ್ನೋದ್ ಅದಕೆ ತಿಳ್ಳು! ೬

ದೊಡ್ಡೋಡ್ ಸತ್ಯ ನಂ ಮುಂದೇನೆ
ಬಿದ್ಕೊಂಡ್ ಒದ್ದಾಡ್ತಿದ್ರೂ
ಸುಂಕಿದ್ದೇವೆ. ಯಾವಾಗ್ ಅದನ
ನಾವ್ಗೊಳ್ ಕಲಿಯೋದಾದ್ರೂ? ೭

ತಿಳದೋರ್ ಕಾಲ್ ಇಡಕೊಂಡಿ ಕಲಿಯೋರ್
ಯಿಂದಿನ್ ಕಾಲ್ದಾಗ್ ಇದ್ರು ;
ಕಲಿಯೋ ಮಂದಿ ಎಲ್ಲಾರೀಗ
ಕಲ್ನೋರ್ ಮೇಲ್ ಬಂದ್ ಬಿದ್ರೂ ! ೮

---

## ೫೮. ದುಕ್ಕ

ಕಯ್ಲಾದ್ ಔಸ್ದಿ ಕುಡದೋನಂಗೆ
ಮೊಕಾನ್ ಯಾಕ್ ಸಿಂಡಸ್ತೀ ?
ನಿಂಗೊಂದ್ ದುಕ್ಕ ಬಂದಿದ್ರೆ ಅದನ
ನಂಗಳ್ ಮುಂದ್ ಯಾಕ್ ಇಸ್ತೀ ?
ನಮುಗ್ಯಾಕ್ ದುಕ್ಕ ತಸ್ತೀ ?
ಮುಕದಾಗ್ ಸೋನೆ ಯಿಡಕೊಂಡಂಗೆ
ಗೋಳ್ಯಾಕ್ ಸುಂಕೆ ಸುಸ್ತೀ ? ೧

ದುಕ್ಕಾನ್ ಒತ್ಕೊಂಡ್ ಬಂದೋರ್ ನಾವು !
ಒತ್ಕೊಂಡ್ ಓಗೋರ್ ನಾವು !
ಸಿಕ್ದೋರತ್ರ ಯೋಳ್ಕೊಂಡಾಕ್ಸ್ಲ
ಆರೋಗ್ತೈತ ಕಾವು !
ಸಾಯ್ತದೇನ್ ಈ ಆವು ?
ಆರೋಕಿಲ್ಲ ! ಸಾಯೋಕಿಲ್ಲ !
ಆಸಿ ಸಾಯ್ನೋರ್ ನಾವು ! ೨

ನಂ ನಂ ದುಕ್ಕ ನಂನಂಗೇನೆ
ಪೊರಲಾರದಸ್ಟ್ಸ್ಟ್ ಐತೆ !
ಜತೇಗ್ ನಿಂದೂ ಇರಲಂತಂದ್ರೂ
ಆದರಿಂದ್ ಏನಾಗ್ತೈತೆ ?
ಏನ್ ಬಂದಂಗ್ ಆಯ್ತೈತೆ ?
ಅವರಿವರತ್ರ ಅತ್ರೆ ನಿಂಗೆ
ದುಕ್ ಏನ್ ಕಮ್ಯಾಗ್ತೈತೆ ? ೩

ನಂ ನಂ ದುಕ್ಕ ಸಿಕ್ದೋರತ್ರ
ಮಾಡ್ತಾನಿದ್ರೆ ಮಾಜರ್
ಕೇಳೋರ್ ಎದರಾಗ್ ಇರೊಗಂಟ್ಲೂನೆ
ದುಕ್ಕಾನೆ ಗೈರಾಜರ್ !
ನಾವೆ ದೊರೆಗೊಳ್ ! ರಾಜರ್ !
ಕೇಳೋವ್ರೇನ್ರ ಅಂಗೋಯ್ತಂದ್ರೆ
ತಕ್ಕೊ! ದುಕ್ಕ ಆಜರ್ ! ೪

ದುಕ್ಕ ಗಿಕ್ಕ ಎಲ್ಲ ನೋಡು
ನಂ ನಂ ಮನಸಿದ್ದಂಗೆ!
ಮನಸಿನ್ ಲಗಾಮ್ ನಂ ಕೈಲಿದ್ರೆ
ಇಲ್ದಿದ್ ಇರೋವಂಗೆ!
ಇರೋದ್ ಇಲ್ದಿದ್ದಂಗೆ!
(ಯೆಂಡ ಕುಡದೋನ್ ಮಾತ್ ಅಂತೇಳಿ
ನೆಗಬೇಡೋ ಏ ಪೆಂಗೆ! ) ೫

ದುಕ್ಕ ಇದ್ರೆ ಇತ್ತಂತೇಳು!
ಸಂತೋಸಾನ ಗಳ್ಸು!
ಮಾರೆ ಮೇಗಿನ್ ಇಸ್ಟೇಜಿಂದ
ದುಕ್ಕಕ್ ಕತ್ತ್ ಇಡದ್ ತಳ್ಳು!
ನೆಗೀನ್ ಪರದೆ ಬಿಳ್ಳು!
ಯಿಂಗೆ ದುಕ್ಕಕ್ಕ್ ದಪ್ಪನ್ ಮಾಡಿ
ಅದಕ್ಕ್ ಕೊಸೆ ಕೇಳ್ಸು! ೬

---

## ೫೯. ಜಂಬ

ಸುಂಸುಂಕೇನೆ ನಂಗ್ ಅಂತೀಯ
ಜಂಬದ ಕೋಳಿ ಅಂತ;
ಮನ್ಸನ್ ಮನಸನ್ ನೋಡ್ದೆ ಸುಂಕೆ
ಸಿಕ್ದಂಗ್ ಅಂದ್ರೆ—ಬಂತ! ೧

ತಿಳದೋರ್ ಇತರೋರ್ ಒಗಳೋದ್ಕೆಲ್ಲ
ಕುಣದಾಡ್ತಾರ ಬಿದ್ದಿ?
ತಿಳದೋರ್ ಎಕಡ ಮುಂಡೇಲ್ ಮಡಗಿ
ಕಲ್ತೀನ್ ಒಸಿ ಬುದ್ದಿ! ೨

ಕುಡಿಯೋನ್ ನಾನು! ಆಡೋನ್ ನಾನಾ
ಮೂಳೆ ಮಾಂಸದ್ ಕಂಬ?
ಯೆಂಡ ಕುಂತ್ಕೊಂಡ್ ಆಡಿಸ್ತಿದ್ರೆ—
ನಂಗ್ ಯಾಕಣ್ಣ ಜಂಬ! ೩

ಸೂತ್ರದ್ ಗೊಂಬೆ ಇದ್ದಂಗ್ ಇವ್ನಿ
ಯೆಂಡದ್ ಕೈಲಿ ನಾನು ;
ಯೆಂಗ್ ಆಡಂದ್ರೆ ಅಂಗ್ ಆಡ್ಬೇಕು !
ನಂಗೀ ಜಂಬದಿಂದ್ ಏನು ! ೪

ಮೈಯಿನ್ ತುಂಬ ತುಂಬ್ಕೊಂಡೈತೆ
ಆಡ್ಸೋ ಯೆಂಡದ್ ಮತ್ತು ;
ಜಂಬ ಗಿಂಬ ಅನ್ನೋದ್ಕೆಲ್ಲ
ಜಾಗ ಎಲ್ಲಿಂದ್ ಬತ್ತು ? ೫

ಲೋಕಕ್ ಕುಂತ್ಕೊಂಡಂಗೇ ಕುಂತಿ
ಸಿಕ್ದಂಗ್ ಆಡೋಕ್ ಗೊತ್ತು ;
ಕಣ್ ಬಿಟ್ಕೊಂಡಿ ಅತ್ತಿರ್ಕೋಗಿ
ತಿಳಿಯೋ ಬುದ್ ಎಲ್ಬತ್ತು ? ೬

ಲೋಕದ್ ಚಾಲೇ ಇಂಗೈತೇಂತ
ಕಂಡೇ ಅದೆ ಆದು ;
ಆದ್ರೂ ಏನೋ ಕುಡದೋನ್ ಚಪಲ—
ಯೋಳಾದ್ ಯೋಳ್ಬಿಡಾದು ! ೭

ಯೆಂಡ ಕುಡದೋನ್ ಕಂತೇಂತೇಳಿ
ಮೂಲೇಗ್ ಇದನ್ ಆಕ್ಬಾರ್ದು ;
ಮನ್ಸನ್ ಜೀವ ತಿಳಕೊಳ್ದೇನೆ
ಸುಂಕೆ ನೋಯಿಸ್ಬಾರ್ದು. ೮

---

## ೬೦. ಯೆಂಗೀಸ್ರ್ ಔರೆ ಊವ್ ಇದ್ದಂಗೆ

ಯೆಂಗೀಸ್ರ್ ಔರೆ ಊವ್ ಇದ್ದಂಗೆ—
ನಲುಗಿಸ್ ಬಾರ್ದುರ್ ಔರ್ನ!
ಒಂದ್ ಚೋಟುದ್ದ ಊವಂತ್ ಅದ್ನ
ಒದ್ಡೋನ್ ಇಂದ್ರ ಉದ್ದಾರ್ ಆದ್ನ!
ಯೆಂಗೀಸ್ರೌರೆ ಊವಿದ್ದಂಗೆ—
ನಲುಗಿಸ್ ಬಾರ್ದುರ್ ಔರ್ನ! ೧

---

## ೬೧. ಚೆಂದ

ಅತ್ಕಡಕ್ ಇಕ್ಕಿದ್ ಯೆಂಗ್ಸೆ!
ಚೆಂದುಳ್ಳೋವ್ಳೆ ಯೆಂಗ್ಸೆ!
ಚೆಂದಿವ್ನೀಂತ ಮೆರಿಲೆ ಬಾರ್ದು—
ಬಿದ್ದೋ ಬೀಳ್ತೈತ್ ಅಲ್ಲು!
ಆದಕಿಂತ್ ಎಚ್ಗೆ ದೀಸ ನಿಲ್ತೈತ್
ಅತ್ಕಡಕಿನ್ದ ಕಲ್ಲು! ೧

ಅತ್ಕಡಕ್ ಇಕ್ಕಿದ್ ಯೆಂಗ್ಸೆ!
ಚೆಂದುಳ್ಳೋವ್ಳೆ ಯೆಂಗ್ಸೆ!
ರೂಪ ಓಯ್ತದ್ ಅತ್ಕಡಕ್ ಓಯ್ತದ್
ಆಮೇಲ್ ಒಲ್ ಪಜೀತಿ!
ಅವಕಿಂತ್ ಎಚ್ಗೆ ದೀಸ ನಿಲ್ತೈತ್
ಗಂಡ ಯೆಂಡರ್ ಪ್ರೀತಿ! ೨

---

## ೬೨. ಉಪದೇಸ

ಯೆಣ್ ನಾಯ್ ಇಂದಿನ್ ಗಂಡ್ ನಾಯ್ ಅಂಗೆ
ಸುತ್ಬಾರ್ದ್ ಸಂದಿ ಸಂದಿ!
ಬೀದೀಲ್ ಓಗೋ ಯೆಣ್ಣಂಗಿಸ್ಗೆ
ಕಣ್ ಆಕೋನು ಅಂದಿ! ೧

ಕುಡಕನ್ ಕೈಲಿ ಯೆಂಡ್ ಇದ್ದಂಗೆ
ನಿನಗೌಳ್ ಒಬ್ಳು ಯೆಡ್ತಿ!
ಇದ್ದಿದ್ ಬುಟ್ಟ್ ಇಲ್ದಿದ್ ಬೇಡಿ
ಸಿಕ್ದೌಳ್ ಇಂದ್ ಯಾಕ್ ಓಡ್ತಿ? ೨

ಬೇರೆಯೋಳ್ಗೆ ನೋಡ್ಬೋರ್ಗ್ ಇರೊ
ನರಕ ತಿಸ್ಲಿ ಠಕ್ಕರ್!
ಇಲ್ದೋಳ್ಗ್ ಅಲೆಯೋ ಸಂಬ್ರಂದಲ್ಲಿ
ಇರೋಳ್ ಕೊಟ್ಟಾಳ್ ಚಕ್ಕರ್! ೩

---

## ೬೩. ಯಿಸ್ನು ಪಡಚ

ಪದವಿ ನೋಡ್ಕೊಂಡ್ ದೊಡ್ದೋನ್ ಅನ್ನೋದ್
ಲೋಕಕ್ ಒಂದ್ ಆಳ್ ರೋಗ!
ಇದನ ಕಾಣ್ಬೌದ್ ಎಲ್ಲಾರೂನೆ
ಇಸ್ನೂನ್ ಒಗಳೋದ್ರಾಗ! ೧

ಏನ್ ಯಿಸ್ನೂನೋ! ಬೆಪ್ಪಂಗ್ ಬಿದ್ದೌನ್
ಆಲಿನ್ ಸೌಂದ್ರದ್ ಮದ್ದ!
ಆಲ್ನಲ್ ಬೆಳ್ಳಾಕ್ ಚೀಪ್ತಾನಿರಾಕ್
ಆಸ್ಮಗೂನ ಸುದ್ದ? ೨

ಬುಳ್ಡೇಲ್ ಔಂಗ್ ಒಂದ್ ಇಂಕ್ರಾನಾರ
ಬುದ್ದಿ ಗಿದ್ದಿ ಇದ್ರೆ!
ಯೋಚ್ನೆ ಬೇಡ್ವ—ಯಾವಾಗ್ನಾರ
ಆಲ್ ಒಡದ್ ಉಳ ಬಿದ್ರೆ! ೩

ಯಿಸ್ನೂಂತ್ ಅಂದ್ರೆ—ಬ್ರಮ್ಮಂಗ್ ಅಪ್ಪ!
ಯೆಚ್ಗೆ ಯೋಳಾದ್ ಯಾಕ?
ಮಗನೆ ಮೊದ್ದಿನ್ ಮುದ್ದೆ ಆದ್ರೆ
ಅಪ್ಪ ಯೆಂಗಿರಬೇಕ! ೪

ನಾನೇನಾರ ಯಿಸ್ನಾಗಿದ್ರೆ
ಗೊತ್ತಾ ಏನ್ ಮಾಡ್ತಿದ್ದೆ?
ಯೆಂಡದ್ ಸೌಂದ್ರದ್ ಮದ್ಧಕ್ಕೋಗಿ
ಝಾಂಡ ಆಕ್ಬುಡ್ತಿದ್ದೆ! ೫

ಸೇಸನ್ ಸಾವಿರ್ ತಲೆಗೊಳ್ನೂವೆ
ಸಾಲಾ ಈಸ್ಕೊಂಬುಟ್ಟು
ಸೌಂದ್ರಕ್ ಬಾಯ್ ಇಟ್ ಈದಾರ್ಂತ್ ಅಂದ್ರೆ
ಸೌಂದ್ರಕ್ ಸೌಂದ್ರೆ ಛಟ್ಟು! ೬

ದೊಡ್ಡ್ ಒಂದ್ ಸೌಂದ್ರ ಕಾಲಿ ಆದ್ರೆ
ಇನ್ನಾ ಅವೆ ಆರು !
ಆಲು ! ತುಪ್ಪ ! ಮೊಸರು ! ಯೆಣ್ಣೆ !
ಕಬ್ಬಿನ್ನಾಲು ! ನೀರು ! ೭

ಮಿಕ್ಕಿದ್ ಆರ್ನು ಮುಂದ್ ಇಟ್ಕೊಂಡಿ
ಭೂ ಮಂತ್ರಾಂದ್ರೆ ಆಯ್ತು !
ಯಿಸ್ನು ಆದೋನ್ ಸಕ್ತೀಂತ್ ಅಂದ್ರೆ
ಎಲ್ಲಾ ಯೆಂಡ್ ಆಗೋಯ್ತು ! ೮

ಬುದ್ಧಿ ಇದ್ದೋರ್ಗ್ ಎಲ್ಲೈತ್ ಸಕ್ತಿ ?
ಯೋನೇಳ್ಕೊಂಡ್ ಏನ್ ಬತ್ತು !
ಸಕ್ತಿ ಇದ್ದೋರ್ಗ್ ಬುದ್ಧಿ ಇಲ್ದಿದ್ರ್
ಅದೂ ಒಂದು ಗತ್ತು ! ೯

ದೊಡ್ಡೋನ್ ಯಿಸ್ನು ಕಲ್ತ್ಕೊಬಾರ್ದ
ಚಿಕ್ಕೋನ್ ಕುಡಕನ್ ಸೇರಿ !
ಚಿ ! ಚಿ ! ಚಿ ! ಚಿ ! ಎಲ್ಲಾರ್ ಉಂಟ !
ಆಲ್ನಲ್ಲೆ ಔನ್ ಗೋರಿ ! ೧೦

---

## ೬೪. ದೇವ್ರು

ಮುಚ್ಕೊ ನಿನ್ನ್ ಬಾಯಿ! ಏ ಬೇವಾರ್ಸಿ!
ಬಗವಂತ್ನ್ ಎಸರು ನಮಗೆ ತಾರ್ಸಿ!
ಇಲ್ದಿದ್ನೆಲ್ಲ ವುಟ್ಟೇಸ್ಕೊಂಡಿ
ಏಕ್ ಸುಂಕ್ ಕೂಗ್ತಿ ಕಾಲಿ?
ನಮಗೆ ದೇವ್ರು ಯೆಂಗೌನೇಂದ್ರೆ
ಮುತ್ತೈದೇಗೆ ತಾಲಿ! ೧

ದೇವ್ರ್ ಇಲ್ಲಾಂತ ಯೋಳ್ದಿ ನೀನು
ದೇವ್ರ್ ಔನೇಂತ ಯೋಳ್ತೀನ್ ನಾನು!
ಮಡಿಕೇಲ್ ತುಂಬಿದ್ ಯೆಂಡ ತನ್ಗೆ
ಸಿಕ್ದೆ ವೋದ್ರೆ ಸೋತು
ಪರ್ಪಂಚ್ದಲ್ಲೇ ಯೆಂಡಿಲ್ಲಾಂದ್ರೆ
ಆದಾ ಸಾಜ ಮಾತು! ೨

ನನಗೇನ್ ಬೇಡ ನಿನ್ ಬುದ್ವಾದ!
ನಂಗೂ ನಿಂಗೂ ಬಾಳ ಬೇದ!
ನಂ ತಾಪತ್ರೇನ್ ಮುಳಗಿಸ್ತೈತೆ
ಬಗವಂತ್ನ್ ಎಸರಿನ್ ಸಕ್ತಿ!
ಆದಕೇ ನಮಗೆ ಬಗವಂತ್ನ್ ಎಸರು
ಅಂದ್ರೆ ಆಪಾಟಿ ಬಕ್ತಿ! ೩

ದೇವ್ರ್ ಔನಂತೆ! ದೇವ್ರ್ ಇಲ್ವಂತೆ!
ಯೋಳಾರ್ ಯೋಳ್ಲಿ—ಅದಕೇನಂತೆ?
ದೇವ್ರ್ ಔನ್ ಅಂತ ನೆಂಕೊಳ್ವಾದು
ನಮಗೆ ಜೀವ—ಉಸರು!
ಔನಲ್ ನೆಮ್ಕ ಮಡಿಕ್ಕೊಳ್ವಾದು
ನಮಗೆ ನಮ್ದಿ ನಸರು! ೪

---

## ೬೫. ಯಿಸ್ವಾಮಿತ್ರ ರತ್ನ

ಲೋಕ ಸುಂಕೆ ಕೆಟ್ಟೋಗೈತೆ!
ಪೂರ! ತುಂಬ! ಬಾಳ!
ಬೂತಗೊಳ್ ಯಿಗ್ತ ಕುಣದ್ರೆ—ಅದೊ!
ದೆಯ್ಗೊಳ್ ಆಕೊ ತಾಳ! ೧

ಮುಡ್ಡಿಗ್ ಕಚ್ಚ್ ವೊಟ್ಟೇಗಿಚ್ಚ್
ಏನ್ ಎಂಗ್ ಎಚ್ಕೊಂಡೈತೆ!
ಸುಕ ಸಾಂತಿ ತೃಪ್ತಿ ಎಲ್ಕು
ಬಾಗಿಲ್ ಮುಚ್ಕೊಂಡೈತೆ! ೨

ಐಕುಂಟ್ದ್ ಅಪ್ನಂಗ್ ಇದ್ ನಂ ದೇಸ
ಈಗ್ ಎಂಗೈತೆ ನೋಡು!
ಕಟಕರ್ ಕೋಣೆ! ನರಕಕ್ ಅಪ್ಪ!
ಬದಿಕಿರೋರ್ ಸುಡಗಾಡು! ೩

ಮುನ್ನೂರ್ ಮುವ್ವತ್ ಕೋಟಿ ದೇವ್ರೂ
ಸುಂಕೆ ಕುಂತ್ಕೊಂಡೌರೆ!
ನರಳೋರ್ ಗೋಳ್ಗಿ ಕಿವಿ ಮುಚ್ಕೊಂಡಿ
ಸತ್ತಂಗ್ ಬಿದ್ಕೊಂಡೌರೆ! ೪

ದೇವ್ರಂತ್ ಅನ್ನೋ ದೊಡ್ ಯೆಸರ್ ಬೇಕು—
ಪದವಿ ಸಂಬ್ಳ ಬೇಕು;
ಕಟ್ಕೊಂಡ್ ಕೆಲಸ ಮಾಡ್ದಿದ್ರೂನೆ—
ಆಹ! ಏನ್ ನಿಂ ಜೋಕು! ೫

ದೇವ್ರು ಗೀವ್ರು ಅನ್ಕೊಂಡ್ ಇದ್ರೆ
ನಮುಗ್ ಈಗ್ ಉದ್ಧಾರ್ ಇಲ್ಲ!
ದೇವ್ರಿಗೆ ದೇವ್ರೆ! ನಮುಗೇ ನಾವೇ!
ಬೆಳದವರ್ ಪಾಲಿಗ್ ಬೆಲ್ಲ! ೬

ಬದಕ್‌ಬೇಕಂದ್ರೆ—ಈ ಲೋಕ್ದಿಂದ
ಬಚಾವ್ ಆಗ್ಬೇಕ್ ತುರ್ತು;
ನಮ್ದೇ ಲೋಕ ವುಟ್ಟಿಸ್ಕೊಬೇಕು
ಈ ಲೋಕಾನೆ ಮುರ್ತು! ೭

'ಇನ್ನೊಬ್ಬ ಇಂದ್ರನ್ ಕರಿಸ್ತೀನಿ'
ಅಂದಂಗ್ ಯಿಸ್ವಾಮಿತ್ರ—
'ನನ್ದೇ ಲೋಕ ಕಟ್ಕೊಂತೀನಿ'
ಅನ್ನೋದ್ ರತ್ನನ್ ಅತ್ರ! ೮

---

## ೬೬. ಕರ್ಮ

ಕೈಲ್ ಕಿಸೀದೆ ಕರ್ಮಾಂತ್ ಕಿರ್ಲ್ಲೋ
ಕಂಜೋರ್ ಆದ್ಮಿ! ಬಕ್ರ!
ಕೈಲ್ ಆಗೋರ್ನ್ನ ಕೆಳಕ್ ಎಳಿಯೋನು
ನೀನ್ ಎಲ್ ಉಟ್ಟೋ! ವಕ್ರ! ೧

ಕರ್ಮಾಂತ್ ಅಂದ್ರೆ—ಯಿಂದ್ ನಾವ್ ಆಕಿದ್
ಬೀಜದ್ ಊ ಅಣ್ ಅಲ್ಲ!
ಕರ್ಮಾಂತ್ ಅಂದ್ರೆ—ಈಗ್ ನಾವ್ ಸಿಕ್ಕೋನ್
ಮುಸ್ಟೀಗ್ ತೋರ್ಸೋ ಗಲ್ಲ! ೨

ಕರ್ಮಕ್ ಕೈ ಮುಗ್ದ್ ಜೈ ಅಂದೌನ್ಗೆ
ಅಬ್ಬಿ ವ್ಯೈ ನ್ಯೈ ದೇಖ!
ಮಡಿಗಿಸ್ಕೊಳ್ಳೋನ್ ತಲೆಮೇಗ್ ಇನ್ನಸ್ಟ್
ಮಡಗೋಂತೈತೆ ಲೋಕ! ೩

ನೀನ್ ಅಂತನ್ನೋ ನಾಮರ್ದನ್ಗೆ
ನಿನ್ ಅಪ್ಪಾಂತ್ ಅನ್ಬೇಕು!
ತುಳಿಯಾಕ್ ಬಂದೌನ್ಗ್ ತಿರಗ್ಸಂಗ್ ಎಸದು
ಕರ್ಮಕ್ ಬೆಂಕ್ಯಾಕ್ಬೇಕು. ೪

---

## ೬೭. ರತ್ನನ್ ಮಾತು

ನಿನ್ ಕೈ ಕೆಳಗ್ನೋನ್ ನಾನ್ ಅಂದಾಕ್ಸ್ನ
'ಲೋ' ಅಂತ್ ಏಳ್ ಆನ್ಬೇಕ?
'ಅಪ್ಪ ಅಣ್ಣ' ಆನ್ನೋದ್ ಬುಟ್ಟೆ
ದೊಡ್‌ಗಿಡ್‌ತನ ಮೂಲೇಗ್ ಇಟ್ಟೆ
ತಿಳದೋನೇನೆ ಯಿಂಗಂತ್ ಅಂದ್ರೆ
ಮೆಚ್ಕೊಂತೈತ ಲೋಕ? ೧

ಮೂರ್ಕೆಯೋನ್ಗೆ ಚಿಕ್ಕೋನ್ ಮಾಡಿ
ದೊಡ್ಮನಸಾದೇಂತ್ ತಿಳದಿ
ಮೋಸ್ ಓಗ್ಬೇಡ. ಚಿಕ್ದು ದೊಡ್ದು
ವೋಗೋದೆಲ್ಲಾ ನಸೀಬ್ ಯಿಡ್ದು!
ಆರ್ಕಾಸ್ ರೂಪಾಯ್ ಆಗೋಗ್ತೈತ
ಕೊಟ್ರೆ ಸುಣ್ಣ ಬಳದಿ? ೨

ನಸೀಬ್ ಒಂದು ಬಸೀತಾನಿದ್ರೆ
ಮನ್ಸ ದೇವ್ರ ಆಗ್ತಾನೆ!
ಕಂಡಿದ್ ನೀರೂ ಯೆಂಡಾಗ್ತೈತೆ!
ಬತ್ಕೊಂಡ್ ವೊಟ್ಟೆ ಗುಂಡಾಗ್ತೈತೆ!
ನಸೀಬ್ ಏನ್ರ ಕೋಟಾ ಆದ್ರೆ
ಎಲ್ಲಾರ್ ಬೆನ್ನೂ ಗೂನೆ! ೩

ತಾಬೇದಾರಿ ಒಂದ್ ಸುಡಗಾಡು!
ಮನ್ಸನ್ ಮಣ್ ಮಾಡ್ತೈತೆ!
ತಾಬೇದಾರ್ರು ಮೇಲ್ನೋರ್ ಎದರು
ಯಿಂಗ್ ಅನ್ಬಾರ್ದು. ಗೊತ್ತು. ಆದ್ರೂ

ನರಮನ್ಸನ್ನೋನ್ ಸೈಸೋಕೂನೆ
ಮಿತಿ ಅಳತೆ ಐತೆ! ೪

ದೊಡ್ಡೋನ್ ನೀನು ಚಿಕ್ಕೋನ್ ನಾನು
ಇದ್ರೂ ಇರಬೌದ್, ಯೋಳ್ಕೊ;
ಆದ್ರೂನೂನೆ 'ಚಿಕ್ಕೋನ್ ನೀನು'
ಅಂತೇಳಂತ ಮೂರೊತ್ತೂನು
ಮೊಟಕೋದ್ ಮಾತ್ರ ದೊಡ್ತನಾಲ್ಲ—
ಅನ್ನೋದ್ ಚೆಂದಾಗ್ ತಿಳ್ಕೊ! ೫

ತಿಳದೋರ್ಗ್ ಇಂಗೇಂತ್ ಯೋಳಾಕ್ ನಾನ!
ಕುಡಕ! ಅಳ್ಳಿ ಮುಕ್ಕ!
ನನಗೇನ್ ಅಂತ ಜಂಬಾಸಿಲ್ಲ.
ಆದ್ರೂನೆ ನನಗಿರೋದೆಲ್ಲ—
ತಿಳದೋರ್ಗೂನೆ ಮುಂಕ್ ಮುಚ್ಕೋಂತ
ಅನ್ನೋದ್ ಒಂದೇ ದುಕ್ಕ! ೬

---

## ೭೮. ಮಂಗಳಾರತಿ

ಬದಿಕಿದ್ರೆ ಇರಬೇಕ್ ರುಸ್ತುಂ ಅಂಗೆ!
ಇಲ್ದಿದ್ರೆ ಅನ್ಬೇಕ್: 'ಬಂದೇ ಗಂಗೆ!'
ಸತ್ತಂಗ್ ಬದಿಕಿರಬಾರ್ದು!
ಬಟ್ಟೆ ಬೇಕ್ ಅಂದ್ರೆ ಇಲ್ಲಾನ್ಬೇಕು!
ಕೊಟ್ರೆ ಮೈಗ್ ಒಪ್ಪಂಗ್ ಇರಬೇಕು!
ಚಿಂದಿ ಕೊಡಬಾರ್ದ್ ಆರ್ದು! ೧

---

## ೬೯. ಜೋಗಿನ್ ಜಲಪಾತ

ಅದೊದೊದೋ! ರಾಜಾ! ರೋರೀರ್!
ರಾಕೀಟ್! ಆಮೇಲ್ ಲೇಡಿ!
ಜೋಗಿನ್ ಜಲಪಾತ್ ಅಂತಂತಾರೆ
ಇವುಗೊಳ್ ನಾಕಕ್ ಕೂಡಿ! ೧

ನಷ್ಟಕ್ ಸಿಕ್ಕಿ ನರಳೋನ್ಗೇನೆ
ಮೇಲಿಂದ್ ಮೇಲೆ ಕಷ್ಟ
ಒದ್ಕೊಂಡ್ ಬಂದಿ ಬಡದ್ ಇಕ್ಕೋದ್ನ
ಮಾಡ್ತೈತ್ ರಾಜ ಸ್ಪಷ್ಟ! ೨

ದುಡ್ ಉಳ್ಳೋರು ದುಡ್ ಇಲ್ದೋರ್ನ
ಗದರಿಸ್ ಓಡ್ಸೋ ಅಂಗೆ
ರೋರಿರ್ ಸದ್ದು ನೆಪ್ ತರ್ತೈತೆ
ಕೇಳ್ತ ನಿಂತ್ರೆ ನಂಗೆ! ೩

ಬಡವನ್ಗ್ ಮುಕ್ಕೊ ಸಾವಿರ್ ಸಂಕ್ಟ
ಜಾಗಾ ಸಾಲ್ದೆ ಒಳಗೆ
ಉಕ್ಕ್ ಬರೋವಂಗ್ ಎದ್ದ್ ಬರ್ತೈತೆ
ರಾಕೀಟ್ ಉಳ್ಳಿ ಕೆಳಗೆ! ೪

ಜಾರ್ತ ಲೇಡಿ ತೇಲ್ತ ಬಂದ್ರೆ
ವೈ ಝುುಂ ಝುುಂ ಅಂತೈತೆ!
ಬಡವನ್ಗ್ ತಿನ್ನೋ ಸಿರಿಮುಂತಮ್ಕ
ಬಳಕ್ತ ಬಂದಂಗ್ ಐತೆ! ೫

ಬಡವನ್ ಬಾಯ್ಗ್ ಬೀಗಾನ್ ಇಕ್ಕಿ
ಬಣ್ಣ ಮೇಲ್ ಬಳಿದಂಗೆ
ಜಲಪಾತ್ ಮೇಲ್ ಏನ್ ಕಾಮನ್ ಬಿಲ್ಲು!
ಆಹ! ಬಿಲ್ಲಿನ್ ರಂಗೆ! ೬

ಬಡವನ್ ಬದುಕು ಎದ್ದ್ ಬಂದಂಗೆ
ಜೋಗ್ ಕಾಣ್ತಿದ್ರೆ ಕಣ್ಗೆ—
ಸುತ್ತಿನ್ ಕಾಡೂ ಕಾಮನ್ ಬಿಲ್ಲೂ
ನೆಗತಿರ್ತಾವೆ ತಣ್ಗೆ! ೭

ಮಿಕ್ಕೋರ್ ಕಸ್ಟ ಕಟ್ಕೊಂಡ್ ಏನು?
ಔರೋರ್ ಸುಕ ಔರ್ಗೆ!
ಪಾನ್ಕ ಕುಡಿಯೋರ್ ಕುಡದ್ ಅನಬೋಸ್ಲಿ!
ವೊರೋರ್ ಒರತಾರ್ ಚೌರ್ಗೆ! ೮

---

## ೨೦. ಕೊಳದಾಗ್ ತೇಲ್ತಿದ್ದ್ ಬೆಂಡು

ಬೂವಿಗಾಗ್ ಗೋಂದ್ ಆಕ್ ಅಂಟೇಸ್ದಂಗೆ
ಅತ್ತಾಗ್ ಇತ್ತಾಗ್ ಅಳ್ಳಾಡ್ದಂಗೆ
ಕೊಳದಾಗ್ ನಿಂತಿತ್ತ್ ನೀರು.
ಗಂಡನ್ ತುಟೀಗ್ ಯೆಡ್ತಿ ಮುತ್ತು
ಕುಂತಂಗ್ ಕೊಳದಾಗ್ ಕುಂತ್ಕೊಂಡಿತ್ತು
ಒಂದ್ ಚಿಕ್ ಬೆಂಡಿನ್ ಚೂರು. ೧

ಪಡಕಾನೇಗೆ ತಗದ್ ಗೇಟಿಂದ
ಕುಡಕರ್ ನುಗ್ದಂಗ್ ಅತ್ತಾಗಿಂದ
ಕೊಳಕ್ಕ್ ಒಂದ್ ಒಳಿ ನುಗ್ತು!
ತನ್ ಪಾಡ್ ತಂಗ್ ಅಂತ್ ಕುಂತಿದ್ದ್ ಬೆಂಡು
ನುಗ್ಗಿದ್ ನೀರಿಗ್ ಕೈ ಮುಕ್ಕೊಂಡು
ಅದರ್ ದಾರೀಗೆ ಬಗ್ತು! ೨

ಸಮಯಕ್ಕ್ ದುಮುಕಿದ್ ಸಾಲ್ಗಾರ್ರಂಗೆ
ಅತ್ತೂ ದಿಕ್ಕಿಂದ್ ದೆಯ್ಗೋಳಂಗೆ
ಕೊಳಕೆ ನೀರ್ ನುಗ್ಗೋಯ್ತು!
ತೇಲ್ತಿದ್ ಬೆಂಡು ಕೊಳದ್ ಒಳೀಕೆ
ಗಿರ್ರಂತ್ ತಿರಗೋ ಆಳ್ ಸುಳೀಗೆ
ಸಿಕ್ಕೊಂಡ್ ಪಡಚಾಗೋಯ್ತು! ೩

ಅದನ ಕಂಡೋರ್ ಎಲ್ರು ಬೆರತು
'ಅಯ್ಯೋ ಪಾಪ' ಅಂದ್ರು ವೊರತು
ಮುಳಗೋದ್ ತಪ್ಪೀಸ್ಲಿಲ್ಲ!
ಕೊಳಕೊಂದ್ ಚಿಕ್ದಾಗ್ ಕಟ್ಟಿ ಕಟ್ಟಿ
ಬೆಂಡಿನ್ನ್ ಬದಸೋಕ್ ನೀರ್ ತಡದಿಟ್ಟಿ
ಉಳಸ್ಬೌದಾಗಿತ್ತಲ್ಲ! ೪

---

## ೭೧. ದೊಡ್ಡೋರ್ ಯೆಸರು

ನಂ ಊರ್‍ನಾಗ್ ಒಂದ್ ದೊಡ್ಡ್ ಕಟ್ಟೇಯ್ತು—
ಲಸ್ಮಪ್ಪನ್ ಕಟ್ಟೇಂತ;
ಅಂಗೇ ನೋಡ್ತೀನ್ ನಮ್ಮೂರ್ ಕಟ್ಟೇಗ್
ಈ ಯೆಸರ್ ಯಾಕ್ ಬಂತೂಂತ. ೧

ಲಸ್ಮಪ್ಪೇನೋ ಲಸ್ನಾದ್ಕಾರಿ!
ಕಟ್ಟೇಗ್ ಔನ್ದೇನ್ ಅಂಗು?
ಪೈಸಾ ಕೊಟ್ಟೋರ್ ಪ್ರಜೆಗೋಳ್ ನಾವು!
ಅದೇ ಅನುಮಾನ್ ನಂಗು! ೨

ಇಂಜ್ನೀರ್ ಸಾಬ್ರು ಉಸ್ತಾವ್ರೀಗೆ,
ಕೆಲಸಕ್ ಮೇಸ್ತ್ರಿ ಗ್ಯಾಂಗು!
ಯೆಸರ್ ಈಸ್ಕೊಳ್ಳಾಕ್ ಮಾತ್ರ ಲಸ್ಮ!
ಫೌಲ್ ಮಾಡ್ ಕೊಟ್ಟ ಟಾಂಗು! ೩

ಯಿಂಗೇ ಸೌಕಾರ್ ರಂಗೈನ್ ಎಸರೀಗ್
ನಮ್ಮೂರ್ ಬೀದಿ ಬಿಡದಿ!
ರಸ್ತೇನ್ ಔನೇನ್ ತೋಟಿ ತಿಮ್ನಂಗ್
ಗುಡಿಸ್ಯಾನ್ ಪೊರ್ಕೇ ಇಡದಿ? ೪

ಅಂಗೇ ಸುಂಕೆ ನೋಡ್ತಾನೀವ್ನಿ
ನಾನೂ ವುಟ್ದಾಗ್ಲಿಂದ—
ಚಿಕ್ಕೋರ್ ಕಸ್ಟಬಿದ್ದ್ ಬೆಳಸಿದ್ದ್ ನುಂಗಾಕ್
ದೊಡ್ಡೋರ್ ಸಿದ್ಧ ಅಂದ! ೫

ದೊಡ್ಡೋರ್ ವೊಟ್ಟೆ ಬಲೆ ದೊಡ್ಡಣ್ಣ !
ಕಂಡಿದ್ ಗುಳುಂ ! ಸ್ವಾಹ !
ತಿಂದಿ ತೇಗ್ತ ಕುಡಿತಿದ್ದಸ್ಟೂ
ಏರ್ತೈತ್ ಅಸುವು ದಾಹ ! ೬

ಲಕ್ಸ ಚಿಕ್ಕೋರ್ ಮಾಡಿದ್ ಕೆಲಸ
ದೊಡ್ಡೋರ್ ಒಬ್ಬಂಗ್ ಎಸರು !
ಇಂತಾ ದೊಡ್ಡೋರ್ ದೊಡ್ಡ್ ಎಸರೂಂದ್ರೆ—
ಲಗ್ಗ್ ಆಗ್ದೇನೆ ಬಸರು ! ೭

---

## ೭೨. ನಾಜೋಕು

ಜೀತದ ಜೀವದ ಕುಲಿಮೇಲಿ
ಬದುಕೋ ಆಸೇ ಕಲ್ ಮೇಲಿ
ಬೆವರಿನ್ ರೂಪೈ ರಕ್ತದ್ ಮೋರ
ಠಣಗುಡ್ತ ಯೇಳ್ತದೆ ನೋಡ್ ಅಲ್ ನೇರ—
ಮುರಕಲ್ ಜೋಪ್ಡಿ ಟಂಕ್ಸಾಲೆ !
ಬತ್ಕೊಂಡ್ ವೊಟ್ಟೆ ಆಕ್ಸಾಲೆ ! ೧

ಬದುಕೋಕ್ ಬಿಡಕಾಸ್ ಪಡೆಯಾಕೆ
ಲಕ್ಸಾಂತ್ರ ರೂಪಾಯ್ ದುಡದಾಕಿ
ಮಂಡೇಲ್ ಮಡಗಿ ಸಿಕ್ದೋರ್ ಜೋಡು
ಮಂಕ್ ಇಡದಂಗೆ ದುಡಿತ್ತೈತ್ ನೋಡು—
ವುತ್ತಾ ಕಟ್ಟೋ ಗೆದ್ಲುಳ!
ಜೇನ್ ಕೂಡಾಕೋ ಜೇನುಳ! ೨

ಸಿಗಿಯಾಕ್ ಒಳ್ಳೇ ವೋಪಾಗಿ
ಆನೇಗ್ ಬಾಳೆ ತೋಪಾಗಿ
ಬತ್ಕೊಂಡ್ ವೊಟ್ಟೆ ಸಿಕ್ಕೈತೇಂತ
ಬಗಿಯೋ ಡೊಳ್ಳೇನ್ ನೋಡ್ದ ಮಂತೆ—
ವುತ್ತಾ ಅತ್ತೋ ಎಬ್ಬಾವ್ನ!
ಜೇನ್ ಕದ್ದ್ ಜನ್ಮ ದಬ್ಬಾವ್ನ! ೩

ಅಳ್ಳ ಕೆಳಕ್ಕ್ ಕೆಳಕ್ಕ್ ಒತ್ಕೋಂತೆ!
ಬೆಟ್ಟ ಬೆಟ್ಟಾನ್ ಯೆತ್ಕೋಂತೆ!
'ಬದುಕೋದ್ ಸಾಲ್ದು, ಬದುಕಿಸ್ಬೇಕು'
ಅಂತ್ ಅಂಗಿದ್ರೆ—ಅದು ನಾಜೋಕು!
ನಾಜೋಕಿನ್ದ್ ಈ ಕಾಲ್ದಲ್ಲಿ
ನೀರೇ ಇಲ್ಲ—ಬರಿ ನಲ್ಲಿ! ೪

---

## ೭೩. ಬಡವನ್ ದೇವ್ರು

ಸಾವರ್ ಜನಕೆ ಸಾವರ್ ದೇವ್ರು !
ಬಡವನ್ ದೇವ್ರು ವೊಟ್ಟೆ !
ದುಡ್ಡಿನ್ ಡಬ್ಬಿ ! ಯೋಳಾದ್ ಕೇಳು !
ಸತ್ಯಕ್ ನಾ ಬಾಯ್ ಕೊಟ್ಟೆ ! ೧

ತಿನ್ನದ್ ಕಲ್ಲಿನ್ ದೇವರ್ ಮುಂದೆ
ತಿಂಡಿ ತುಂಬಿದ್ ತಟ್ಟೆ !
ಕಾಲಿ ತಿಂದು ಕಾಲಿ ತಿಂದು
ಕೆರಳುರಳ್ಬೈತೆ ವೊಟ್ಟೆ ! ೨

ಬಡವನ್ ದೇವ್ರುನ್ ಕೆರಳಿಸ್ಬಾರ್ದುರ್—
ಲೋಕಕ್ ಒಳ್ಳೇದಲ್ಲ !
ಬಡವನ್ ದೇವ್ರಿಗ್ ನೆರಳಿಸ್ತಿದ್ರೆ—
ಲೋಕಕ್ ಬೆಳಕೇ ಇಲ್ಲ ! ೩

ನೀ ಮುಗ್ದ್ ಪೂಜೇ ಮಾಡೋ ದೇವ್ರು
ಮುನ್ನೂರು ಮುವ್ವತ್ ಕೋಟಿ
ಇದ್ರೂ, ಬಡವನ್ ದೇವ್ರೀಗೂನೆ
ತೋರ್ಸುರ್ ಆ ಪೈಪೋಟಿ. ೪

ತಿನ್ಲೊನಾರ್ವುರ್ ದುಡಿಲೂನಾರ್ವುರ್
ಕಲ್ಲಿನ್ ದೇವರ್ ಗುಂಪು !
ಬಡವನ್ ದೇವ್ರಿಗ್ ನೀನ್ ಇಕ್ಕಿದ್ರೆ
ನಿನ್ಗೆ ಬಾಳ ತಂಪು ! ೫

ನಂ ದೇವರ್ಗೆ ಬೋನ ನೀಡು—
ದರ್ಮ ಬರತ್ತೈತ್ ನಿಂಗೆ ;
ದುಡ್ಡಿನ್ ಡಬ್ಬಿ ಕರಗೀತ್ ಅಂತ
ಸುಂಕೆ ಕುಂತ್ರೆ ಯೆಂಗೆ ? ೬

ಅಗ್ನಾನೀಗೆ ಮೆಲ್ಗ್ ಯೋಳ್ತಾರೆ
ಎಂಟ್ ಅತ್ತ್ ಸಾರಿ ಬುದ್ದಿ ;
ಕೇಳ್ದೆ ವೋದ್ರೆ ಗೊತ್ತೈತಲ್ಲ—
ಯಿಡಕೊಂಡ್ ಮಾಡ್ಸೋದ್ ಒದ್ದಿ ! ೭

ಬಡವನ್ ದೇವ್ರುನ್ ಕೆಣಕ್ಲೆಬಾರ್ದು—
ನೀ ಕಂಡಿಲ್ಲ್ ಅದರ್ ಯೇಟ !
ಬಡವನ್ ದೇವ್ರು ಲೋಕಾನ್ ನುಂಗೋ
ಜೋಲಾಮುಕಿ ! ಜೇಟ ! ೮

ಬಡವನ್ ದೇವ್ರು ಗರ್ಜಿಸ್ತಿದ್ರೆ
ಕೇಳಿಸ್ತಿದ್ರ್ ಆ ಸದ್ದು—
ಕಲ್ಲಿನ್ ದೇವ್ರು ಗಿಲ್ಲಿನ್ ದೇವ್ರು
ಪೇರಿ ಕಿತ್ತಾರ್ ಎದ್ದು ! ೯

ಬೆನ್ನಿನ್ ಚರ್ಮ ಬದ್ರಾಗ್ ಇರಲಿ !
ಬಡವನ್ ದೇವ್ರಿಗ್ ಬೊಗ್ಗು !
ಕಲ್ಲಿನ್ ದೇವ್ರಿಗ್ ಉಲ್ಲೆ ತಿನ್ಸಿ
ಸದ್ಯಕ್ ಉಳದೇಂತ್ ಯಿಗ್ಗು ? ೧೦

ಲೋಕಕ್ ಸಾಂತಿ—ಬಡವನ್ ದೇವ್ರು
ಮಲಗಿರೋವರಗೂನೆ !
ಬಡವನ್ ದೇವ್ರು ಎದ್ದ್ ನಿಂತಾಂದ್ರೆ
ಪ್ರಳಯ ಅದಕೇ ತಾನೆ ! ೧೧

ಪ್ರಳಯ ಬಂದ್ರೆ ಯಾರ್ಗ್ ಏನ್ ಸುಕ ?
ನಾಸ—ಅರಸೂ ಆಳೂ !
ಸಾಯೋರ್ ಜತೆಗೇ ಸಾಯೋ ಬದಲು
ಎಲ್ಲಾರ್ ಸಂಗ್ಡ ಬಾಳು ! ೧೨

---

## ೭೪. ಪ್ರಸ್ನೇಗ್ ಉತ್ರ

ತ್ರುಪ್ತಿ ಕಂಡ್ಕೊಂಡವರೀಗ್ ಮಾತ್ರ
ಯಿಡಿದ್ ರವಾನ್ಸಿ ಬೂಮೀಗ್ ಅತ್ರ
ಮಿಕ್ಕೋರ್ಗ್ ಇಲ್ಲಿ ತಾವ್ ಇಲ್ಲಾಂತ
ಬಂದಂಗ್ ಯಿಂದಕ್ ಅಟ್ತಿದ್ದೆ—
ನಂಗೆ ದೇವರ್ ಪಟ್ಟದ್ರೆ! ೧

ಊರಾಗೆಲ್ಲ ರಾಗಿ ಬಿತ್ಸಿ
ಕಾಲಿ ಜಾಗದಾಗ್ ಗುಡಿಸಿಲ್ ಎತ್ಸಿ
ಬಡವರ್ ಬದಿಕಿನ್ ಒಡಕನ್ ಮುಚ್ಚಿ
ಔರ್ಗೆ ತಮ್ನಂಗ್ ಆಗ್ತಿದ್ದೆ!
ರಾಜನ್ ಪದವೀಗ್ ನೆಗ್ತಿದ್ದೆ! ೨

ಗುಡಿಗೊಳ್ ಪಕ್ದಾಗ್ ಗುಡಿಸಿಲ್ ವೂಡಿ
ಬಡವನ್ನೂನೆ ದೇವರ್ ಮಾಡಿ
ಬಡವರ್ ಬೋನಕ್ ಬೊಗ್ಗೀಸ್ತಿದ್ದೆ
    ಪೂಜಾರಿಗೊಳ್ಗ್ ಎನ್ಕೇನ!
    ಗುರು ನಾನ್ ಆಗೋದ್ ಸುಂಕೇನ! ೩

ಬೀದಿ ಉದ್ಕ್ಕ ಗೇಣ್ಗ್ ಒಂದೊಂದು
ದಪ್ಪ್ ದೊಡ್ಡ್ ಬಾಯಿನ್ ನಲ್ಲಿ ತಂದು
ತಿರಗಿಸ್ತಿದ್ರ—ಯೆಂಡ ವೊದಲು!
    ಮುನಿಸೀಪಾಲ್ಟೀಗ್ ನಾನ್ ಇದ್ರ!
    ಆಗ್ ನನಗೇನ್ರ ಗ್ನಾನ್ ಇದ್ರ! ೪

---

## ೭೫. ಒಗ್ಗಟ್ಟಿನ್ ಗೋಂದು

ಪಂಗ್ತಿ ಬೇದ ಪಾಪಾಂತ್ ಯೋಳಿ
    ಸಾಸ್ತ್ರ ಯೋಳೈತಂತೆ!
ವುಟ್ಟೋರ್ ಪಂಗ್ತೀಲ್ ಬೇದ ಬೇಡಾಂದ್ರ—
    ಬತ್ತು ಕೋಪದ್ ಕಂತೆ! ೧

ನಮಗೇನಾರ ಸಿಕ್ಕೋದಾದ್ರ—
    ಸಾಸ್ತ್ರದ ಸಾಯ ಬೇಕು;
ನಂ ಸುಕ್ಕ್ ಏನ್ರ ಠೋಕರ್ ಬಂದ್ರ—
    'ಸಾಸ್ತ್ರಾನ್ ಆಚೇಗ್ ನೂಕು!' ೨

ಔರೋರ್ ನ್ಯಾಯಕ್ ಔರೋರ್ಗ ಒಂದೊಂದ್
ಸಾಸ್ತ್ರ ವುಟ್ಕೊಂಡ್ಬಂದು
ಬಾಳ ನೀರಾಗೋಯ್ತು ಲೋಕ್ದಾಗ್
ಒಗ್ಗಟ್ಟಿನ್ದ ಗೋಂದು ! ೩

ಒಗ್ಗಟ್ಟಿನ್ ಗೋಂದ್ ಅಂಟ್ದೆ ವೋದ್ರೆ
ಲೋಕ ಚುಕ್ಕಾಚೂರು !
ಲೋಕ ಮುಳುಗೋಕ್ ತಾವ್ ಕೊಟ್ಟೋನ್ಗೆ
ಮೊಕ್ಕೆ ಸೆಗಣಿನೀರು ! ೪

---

## ೭೬. ನಾಡಿನ್ ಬಡವ ಸರ್ಕಸ್ ಸಿಮ್ಮ

ನಾಡಿನ್ ಬಡವ ! ಸರ್ಕಸ್ಸ ಸಿಮ್ಮ !
ಕಮ್ಚಿ ಯಿಡಿದೋನ್ ಬೆಪ್ಪ ನನ್ಮ ತಮ್ಮ !
ಔನ್ಗೆ ಯೆದರಿ ಬಾಲಾ ಮುದರಿ
ಮೂಲ್ಯಾಗ್ ಮುದರ್ಕೊಬೇಕ ?
ಕಮ್ಚಿ ಯಿಡಿದೋನ್ ಕೈಲ್ ಏನ್ ಆಗ್ತೈತ್ ?
ಔನ್ಗೆ ಯೆದರ್ಕೊಬೇಕ ! ೧

ನಿನ್ಗೇ ಗೊತ್ತಿಲ್ಲಾ ನಿನ್ ಸಕ್ತಿ !
ಯೋಳಾಕ್ ಬಂದ್ರೆ ಸಿರ್ರಂತ್ ರೇಗ್ತಿ !

ಕೂಕ್ಕೊಂಡ್ ಕಚ್ಚೋಕ್ ಮೇಲ್ ಆರ್ಬರ್‍ತಿ!
ಯೋನ್ ಯೋಳಾನೆ ಸಿಮ್ಮ!
ಮಕ್ಕಳ್ನ ಇಡಿದಂಗ್ ಇಡಿದ್ಬೈತ್ ನಿನ್ನ
ಕಪ್ಚಿ ಯಿಡಿಯೋ ಗುಮ್ಮ! ೨



ದುಡಿಯೋನ್ ನೀನು! ಪಡೆಯೋನ್ ಔನು!
ಬೋನ್ ನಿನಗಾದ್ರೆ ಔನ್ಗೆ ಗೌನು!
ದುಡ್ಡೀ ದುಡ್ಡೀ ದುಡ್ಡಿನ್ ಬೆಟ್ಟ
ನೀ ಮಾಡಾಕು! ಪೇಸ್ರ್ಫ್!
ನಿನ್ ದುಡ್ನಲ್ಲೆ ತಕ್ಕೋಂತ್ ಒಂದ್ ಕಾಸ್
ನಿಂಗ್ ಔನ್ ಎಸದ್ರೆ ಸೈಸ್ರ್ಫ್! ೩

ಮೈ ನಿಂಗ್ ಐತೆ! ಮನಸ್ ನಿಂಗ್ ಇಲ್ಲ?
ಮನಸೂ ಐತೊ! ನೀನ್ ನೋಡಾಲ್ಲ!
ಸಕ್ತಿ ಅದೆ! ಉಕ್ತಾ ಅದೆ!
ನಿಂಗೆ ಎಲ್ಲಾ ಅದೆ!
ಸರಪ್ಣಿ ಬಿಕ್ಕೊಂಡ್ ಸುಂಕ್ ಯಾಕ್ ಇರಬೇಕ್?
ಯೆತ್ತ್ ಅದನ್ ಆಚೇಗ್ ಒದೆ! ೪

ಬೂಮೀಲ್ ಮನ್ಸ ನೀರಲ್ ಮೀನು
ಮೇಲ್ ನಕ್ಸತ್ರ—ಎಲ್ಲ್ಕು ನೀನು—
ಪರಪಂಚ್ಕೆಲ್ಲ ವೊಡೆಯ ನೀನು!
ಯೇನ್ ಯೋಳಾನೆ ನಿನ್ಗೆ!
ಗುಡಿಸೋ ಪೊರಕೆ ಆಗೋದ್ನಲ್ಲ
ಯೆಜಮಾನ್ನೇನೆ ಮನ್ಗೆ! ೫

ಕಷ್ಟ್ಯಾಗಾ ನೀನ್ ಎದರ್ಕೋಬೇಕು?
'ಹ್ಞ' ಅಂತ್ ಒದರಿ ಗರ್ಜಿಸ್ ಸಾಕು!
ಮೈನಾಗ್ ಕೂದ್ಲು ಶಠಂ ಅಂತ್ ಇರ್ಲಿ!
ಬಾಲದ್ ಬಾವ್ಟ ಯೇರ್ಲಿ!
ಕಷ್ಟ ಯಿಡಕೊಂಡ್ ಯಾವೋನ್ ಬತ್ತಾನ್
ನೋಡ್ಞಾ ಬರೋನ್ ಬರ್ಲಿ! ೬

---

## ೭೭. ಸಕನಿ

ದುರ್‍ಯೋದನಂಗ್ ಒಬ್ಬ ಸಕನಿ ಸೇರ್ಕಂಡಿ
ಎಕ್ಕ ವುಟ್ಟೋಯ್ತು ಅಣ್ಣ ಕೌರೋನ ಮಂಡಿ!
ಅದಿನೆಂಟ್ ಅಕ್ಸೋಯಿಸೀ ಸೇನೆ ಸಿಬ್ಬಂದಿ
ಒಂದೆ ಯಿಡಿ ಬೂದಿಯಾಯ್ತು ಯುದ್ದದಲಿ ಬೆಂದಿ! ೧

ಆಯಾಗಿ ಮಲಗಿದ್ದೋನ್ ಆಸ್ಗೇಗೆ ತಗಣೆ
ಬಂದು ಸೇರ್ಕಂಡಂಗೆ ಸೇರ್ಕಂಡ ಸಕನಿ!
ಸಕನಿ ತಾನೂ ಸತ್ತು ಜತೆಯೋರ್‍ನು ಸಾಯ್ಸಿ
ಬಾಳ ತಕಲೀಫ್ ಮಾಡ್ದ ಸುಂಕೇ ಸತಾಯ್ಸಿ! ೨

ಯೆಂಡಾನ ಬುಂಡೇನೆ ಪಟ್ಟಾಗ್ ಒಡದಂಗೆ
ನಂಬಿದೋರ್‍ಗ್ ಎತ್ತಾಕ್ದ—ಸಕನಿ ಅಂದ್ರ ಅಂಗೆ!
ಒಬ್ಬ ಸಕನೀ ದೆಸೆನಿಂದ್ ಏನೇನ್ ಆಗೋಯ್ತು!
ಪರ್ಪಂಚದ್ ಜೀವಾನೆ ಝುಲ್ಲ್ ಅಂತ್ ಅಂದೋಯ್ತು! ೩

ಈಗ ಲೋಕ್ದಾಗ್ ಒಂದು ಉಲ್ಗ್ ಒಂದು ಸಕನಿ!
ಆದ್ ನೆಪ್ಗೆ ತರ್ತೈತೆ—ಆಳ್ ಮನೇಲ್ ಉಗನಿ!
ಬಾರ್ತಾನೆ ಮಾಡಿಸ್ತು ಯಿಂದ್ ಒಬ್ಬೋನ್ ಸೀತಿ!
ಈಗ ಏನ್ ಆಗ್ತೈತೊ ದೇವರ್ಗೆ ಪ್ರೀತಿ! ೪

## ರತ್ನನ ಕನ್ನಡಕ್ಕೆ ಕನ್ನಡಿ

ಈ ಕನ್ನಡಿಯಲ್ಲಿ ಗುಂಡು ಆವರಣದಲ್ಲಿರುವುದು ಪದಗಳ ಅರ್ಥ; ಚೌಕ ಆವರಣದಲ್ಲಿರುವುದು ಅಧ್ಯಾಹಾರಗಳು, ಹಾಗೂ ಅರ್ಥವಿಸ್ತಾರಗಳು.

### **ರತ್ನನ ಮೊಕಾಬಿಲೆ** (ಪರಿಚಯ)

೧. **ಮೊಟ್ಟಮೊದಲು** ೧. ನನಗೂ ಹೆಂಡಕ್ಕೂ ಬಹಳ ದೋಸ್ತಿ (ಸ್ನೇಹ). ಕುಡಿದುಬಿಟ್ಟಾಗ ಹಾಡುವುದು ನನಗೆ ಪೂರಾ ಜಾಸ್ತಿ (ವಿಪರೀತ ಹೆಚ್ಚು). ನನಗೆ ಹೆಸರು ಹೇಳುತ್ತಾರೆ ರ್ರ ರ್ರ ರ್ರ ರ್‍ರ ರ್ರ ತ್ನ (ಕುಡುಕನ ತೊದಲು ಬಾಯಿಯ ರತ್ನ). ನಾನು ಹಾಡುವ ಪದಗಳು ಹೆಂಡದ ಪ್ರಯತ್ನ. ೨. ಮಹಾಭಾರತ ಬರೆಯುವುದಕ್ಕೆ ವ್ಯಾಸನಿಗೆ ವಿನಾಯಕ ಸಿಕ್ಕಿದಹಾಗೆ, ನನಗೆ ಒಬ್ಬ ಬೇವಾರ್ಸಿ (ಹೇಳಿ ಕೇಳುವವರಿಲ್ಲದವನು, ತಬ್ಬಲಿ) ನಾಯಕನು ಸಿಕ್ಕಿದವನು, ನನ್ನ ಹಾಡನ್ನು ಬರೆದು ಕೂಡಿಸಿದ. ಏನಿದೆಯೊ ಯಾರು ಬಲ್ಲರು ಅವನಿಗೆ ಇರುವ ದರ್ದು (ಅಗತ್ಯ)? ೩. 'ಬರೆದುಕೊಂಡರೆ ಬರೆದುಕೊಂಡು ಹೋಗು, ನಿನಗೂ ಐಲು (ಹುಚ್ಚು), ಆದಷ್ಟೂ ಮಾಡೋಣ ಸಹಾಯ ನಮ್ಮ ಕೈಲೂ' ಎಂದುಕೊಂಡು, ಅವನು ಬರೆದಿದ್ದುದನ್ನು ಅಚ್ಚಿಗೆ ಹಾಕುವುದಕ್ಕೆ ಒಪ್ಪಿ ಕಳಿಸಿದ್ದೇನೆ. ಬೈದೀರಿ ನನಗೇನಾದರೂ ತಪ್ಪಿ! ೪. ಅಕ್ಷರ ಗಿಕ್ಷರ ನನಗೇನೂ ಬರದು. ದೊಡ್ಡ ಚಾಕರಿ (ಕೆಲಸ) ಬೇಕು ಎಂದರೆ ಓದಬೇಕು—ದರ್ದು (ಅಗತ್ಯ). ಪದಗಳು ಚೆನ್ನಾಗಿದ್ದರೆ ಹೆಂಡಕ್ಕೆ ಶಿಪಾರಸ್ಸು (ಒಳ್ಳೆಯ ಹೆಸರು). ಚೆನ್ನಾಗಿ ಇಲ್ಲದಿದ್ದರಂತೂ ತಪ್ಪಿಗೆ ಬೇವಾರ್ಸಿ [ಗುರಿ]!

೨. **ಕುಡಿಕರ ಮಹತ್ವ** ೧. ಕುಡಿಕರ ಮಹತ್ವ ತಿಳಿದುಕೊಳ್ಳದೆಯೆ ನೂಕಬಾರದು ಅವರನ್ನು ಕೆಳಕ್ಕೆ. ಯಾವ ಚಿಪ್ಪಿನಲ್ಲಿ ಯಾವ ಮುತ್ತು ಇದೆಯೊ! ಒಡೆದು ನೋಡಬೇಕು ಒಳಗೆ. ೨. ಕೊಚ್ಚೆ (ಕೆಸರು) ನೀರನ್ನು ಶೋಧಿಸಿತು ಎಂದರೆ ಸಿಕ್ಕುವುದಿಲ್ಲವೆ ಗಂಗೆ? ಸಾಜಾ (ಸಹಜ) ಹೇಳುವವನು ಯಾರಾದರೇನು? ಸತ್ಯ–ಕಣ್ಣು ಕಂಡವನಿಗೆ! ೩. ಅರ್ಥವಿಲ್ಲವೆಂದು ನಗಬೇಡ ಅಣ್ಣ ನಾನು ಕುಡಿದು ಹಾಡುವ ಮಟ್ಟು (ಪದ). ಕುಡಿಕನ ಪದಗಳನ್ನು ಹೊಕ್ಕು ನೋಡಿದರೆ ಮಸ್ತಾಗಿವೆ (ಬಹಳವಾಗಿವೆ) ಗುಟ್ಟು. ೪. ರವಿ ಕಾಣದುದನ್ನು ಕವಿ ಕಂಡ—ಎಂದರೆ ಕವಿಗಳ ತತ್ತ್ವ, ಕವಿ ಕಾಣದುದನ್ನು ಕುಡಿಕ ಕಂಡ ಎನ್ನುವುದು ಕುಡಿಕರ ಮಹತ್ವ!

೩. **ಶೋಧಿಸುವುದು** (ವಿಮರ್ಶೆ) ೧. ಅರ್ಥಮಾಡಿಕೊಂಡು ಹೀಗಲ್ಲ ಹೀಗೆ ಎನ್ನುವವರ ಮಾತು ಗಂಗೆ [ಪವಿತ್ರ ವಸ್ತು ಸ್ಪರ್ಶದಂತೆ]. ಅರ್ಥ ಆಗದಿದ್ದರೂ ಸಿಕ್ಕಿದ ಹಾಗೆ ಎನ್ನುವುದು—ಚಂದ್ರನ ಮುಖಕ್ಕೆ ಉಗಿದಹಾಗೆ!

೪. **ಮನುಷ್ಯರ ಮಾತು** ೧. ಹೇಳುವುದು ಏನಾದರೂ ಹೇಳುವುದಿದ್ದರೆ ಝಟ್‌ಪಟ್ಟೆ (ಬೇಗ ಬೇಗ) ಹೇಳಿ ಮುಗಿಯಿಸು. ಯಾವುದಕ್ಕೆ ಇಕ್ಕ (ಹೊಡೆಯ) ಬೇಕು ಗೊತ್ತುಮಾಡಿಕೊಂಡು, ಆಮೇಲೆ ದೊಣ್ಣೆ ಬೀಸು. ೨. ಸುತ್ತಿಕೊಂಡು ಸುತ್ತಿಕೊಂಡು ಮಾತಾಡುತ್ತಿದ್ದರೆ ಕೇಳುವುದಕ್ಕೆ ಬಹಳ ಪಜೀತಿ. ಬೈರಿಗೆ ಕೊರೆದ ಹಾಗೆ ಕೊರೆಯುತ್ತಾ ಇದ್ದರೆ, ಯಾವ ದೇವರಿಗೆ ಪ್ರೀತಿ? ೩. ಕುಂಬಾರ ಗೌಡನ ಚಕ್ರಕ್ಕೂ, ಗಾಳ (ಮೀನು ಹಿಡಿವ ಕೊಕ್ಕೆ) ನೋಡಿದ ಮೀನಿಗೂ, ಸುತ್ತಿಕೊಂಡು ಸುತ್ತಿಕೊಂಡು ಹೋಗುವುದು ಸಹಜ. ಅದು ಯಾಕೆ ನನಗೂ ನಿನಗೂ? ೪. ಕೇಳುವವರು ಇನ್ನೂ ಕೇಳಬೇಕೆಂದು ಕುಳಿತಿದ್ದ ಹಾಗೆಯೇ, ಹೇಳುವುದನ್ನು ಎಷ್ಟೋ ಅಷ್ಟರಲ್ಲಿ ಹೇಳಿ ಮನೆಗೆ ಹೋಗುವವನಿಗೆ ಮೇನೆ (ಪಲ್ಲಕ್ಕಿ)! [ಗೌರವ ಬರುವುದು]. ೫. ಮಾತು ಇರಬೇಕು--ಮಿಂಚು ಹೊಳೆದ ಹಾಗೆ; ಕೇಳಿದವರು 'ಹ್ಞಾ' ಎನ್ನಬೇಕು. ಸೋನೆ (ಕೊನೆಯಿಲ್ಲದ ಜಿನುಗು ಮಳೆ) ಹಿಡಿದರೆ, ಉಗಿದು ಎಂದಾರು: 'ಮುಚ್ಚಿಕೊಂಡು ಹೋಗೊ, ಸಾಕು.' ೬. ಮನುಷ್ಯನ ಮಾತೆಂದರೆ ಹೇಗಿರಬೇಕು! ಕವಣೆಯ ಗುರಿ ಇದ್ದಹಾಗೆ! ಕೇಳಿದವರ ಮನಸ್ಸಿಗೆ ಲಗತ್ತಾಗಬೇಕು (ಅಂಟಿಕೊಳ್ಳಬೇಕು)—ಮಕ್ಕಳ ಮುತ್ತಿದ್ದಹಾಗೆ!

೫. **ರತ್ನನ ಪ್ರಪಂಚ** ೧. ಹೇಳಿಕೊಳ್ಳುವುದಕ್ಕೆ ಒಂದು ಊರು. ತಲೆಯ ಮೇಲೆ ಒಂದು ಸೂರು (ಮಾಡು, ಮೇಲ್ಛಾವಣಿ). ಮಲಗುವುದಕ್ಕೆ ಭೂಮಿತಾಯಿಯ ಮಂಚ. ಕೈಹಿಡಿದವಳು ಪುಟ್ಟನಂಜಿ ನಗುನಗುತ್ತ ಉಪ್ಪುಗಂಜಿ ಕೊಟ್ಟರೆ, ಆಯಿತು (ಮುಗಿಯಿತು) ರತ್ನನ ಪ್ರಪಂಚ. ೨. ಹಗಲೆಲ್ಲ ಬೆವರು ಹರಿಸಿ, ತಂದುದರಲ್ಲಿ ಒಸಿ (ಕೊಂಚ) ಮುರಿಸಿ (ಚಿಲ್ಲರೆಮಾಡಿ), ಸಂಜೆಯಲ್ಲಿ ಹುಳಿ ಹೆಂಡ ಕೊಂಚ ಹೀರುತ್ತ, ಮೈ ಝುಂ ಎಂದರೆ, ವಾಸನೆ ಘಂ ಘಂ ಎಂದರೆ, ತುಂಬಿಹೋಯಿತು ರತ್ನನ ಪ್ರಪಂಚ. ೩. ಏನೋ ಖುಷಿ (ಸಂತೋಷ) ಆದಾಗ, ಮತ್ತು (ಅಮಲು) ಹೆಚ್ಚಿಹೋದಾಗ, ಹಾಗೆಯೇ ಪ್ರಪಂಚದ ಅಂಚನ್ನು ದಾಟಿಕೊಂಡು ಹಾರಾಡುತ್ತ, ಕನ್ನಡದಲ್ಲಿ ಪದ ಹಾಡುತ್ತ ಹಿಗ್ಗುವುದು ರತ್ನನ ಪ್ರಪಂಚ. ೪. ದುಃಖವಿಲ್ಲ, ದಾಳಿಯಿಲ್ಲ. ನಮಗೆ ಅದರಲ್ಲಿ ಪಾಲಿಲ್ಲ [ನಾವು ಭಾಗಿಗಳಲ್ಲ]. ನಾವು ಕಂಡಿಲ್ಲ ಆ ತಂಚ ವಂಚ (ಮುಚ್ಚುಮರೆ, ಮೋಸ). ನಮ್ಮಿಷ್ಟಕ್ಕೆ ನಾವಾಗಿ, ಇದ್ದುದರಲ್ಲಿ ಹಾಯಾಗಿ ಬಾಳುವುದು ರತ್ನನ ಪ್ರಪಂಚ. ೫. 'ಬಡತನ ಗಿಡತನ ಏನಿದ್ದರೇನು?

ನಡತೆಯನ್ನು ಚೆನ್ನಾಗಿ ಇಟ್ಟುಕೊಳ್ಳುವುದೆ ಅಚ್ಚ (ಸೊಗಸು)' ಎಂದುಕೊಂಡು ಸುಖವಾಗಿ, ಕಷ್ಟಕ್ಕೆ ನಗುಮುಖವಾಗಿ ನೆಗೆಯುವುದೇ ರತ್ನನ ಪ್ರಪಂಚ. ೬. ದೇವರು ಏನಾದರೂ ಕೊಡಲಣ್ಣ, ಕೊಡದಿದ್ದರೆ ಬಿಡಲಣ್ಣ. ನಾವೆಲ್ಲಾ ಅವನಿಗೆ ಬಚ್ಚ (ಮಕ್ಕಳು). ಅವನು ಹಾಕಿದ ತಾಳದ ಹಾಗೆ, ಕಣ್ಣುಮುಚ್ಚಿಕೊಂಡು, ಹೇಳಿದ ಹಾಗೆ ಕುಣಿಯುವುದೇ ರತ್ನನ ಪ್ರಪಂಚ.

೬. **ಕನ್ನಡ ಪದಗಳು** ೧. ಹೆಂಡ, ಹೆಂಡತಿ, ಕನ್ನಡ ಪದಗಳು—ಎಂದರೆ ರತ್ನನಿಗೆ ಪ್ರಾಣ. [ಹೆಂಡದ] ಬುರುಡೆಯನ್ನು ಎತ್ತಿ ಕುಡಿದುಬಿಟ್ಟೆ ಎಂದರೆ—ತೆಗೆದುಕೊ! ಪದಗಳ ಬಾಣ! ೨. ಭಗವಂತನು ಏನಾದರೂ ಭೂಮಿಗೆ ಇಳಿದು, ನನ್ನ ತಾವಿಗೆ (ಹತ್ತಿರಕ್ಕೆ) ಬಂದ ಎಂದೆನ್ನು; ಪರಿಗಿರೀಕ್ಷೆ ಮಾಡುತ್ತಾನೆ ಅವನು. ಭಕ್ತನ ಮೇಲೆ ಅವನ ಕಣ್ಣು! ೩. 'ಹೆಂಡ ಕುಡಿಯುವುದು ಬಿಟ್ಟುಬಿಡು ರತ್ನ' ಎಂದು ಅವನು ಏನಾದರೂ ಎಂದರೆ, ಮೂಗು ಮೂರು ಚೂರಾಗಿ ಮುರಿಸಿಕೊಳ್ಳುತ್ತೇನೆ—ದೇವರ ಮಾತಿಗೆ [ನಾನು] ಅಡ್ಡಬಂದರೆ! ೪. 'ಹೆಂಡ ಬಿಟ್ಟೆ. ಹೆಂಡತಿಯನ್ನು ಬಿಟ್ಟುಬಿಡು' ಎಂದು ಅವನು ಏನಾದರೂ ಎಂದರೆ, ಕಳೆದುಹೋಯಿತೆಂದು ಕುಣಿದಾಡುತ್ತೇನೆ ದೊಡ್ಡದೊಂದು ಕಾಟ! ತೊಂದರೆ! ೫. 'ಕನ್ನಡ ಪದಗಳು ಹಾಡುವುದನ್ನೆಲ್ಲ ನಿಲ್ಲಿಸಿಬಿಡಬೇಕು ರತ್ನ' ಎಂದು ಅವನೆಂದರೆ—ದೇವರಾದರೇನು—ಮಾಡುತ್ತೇನೆ ಅವನಿಗೆ ಖತ್ನ (ಕತ್ತರಿಸುವುದು). ೬. ಅಜ್ಜಿ ಮಾಡುವ ಐಗಳು (ದೊಡ್ಡವರು) ಎಲ್ಲರೂ ದೇವರೇ ಆಗಲಿ, ಎಲ್ಲರೂ; ಕನ್ನಡದ ಸುದ್ದಿಗೇನಾದರೂ ಬಂದರೆ, ಮಾನ ಉಳಿಸುವುದಿಲ್ಲ. ೭. ನರಕಕ್ಕೆ ಇಳಿಸಿ, ನಾಲಿಗೆ ಸೀಳಿಸಿ, ಬಾಯಿ ಹೊಲಿಸಿಹಾಕಿದರೂ, ಮೂಗಿನಲ್ಲಿ ಕನ್ನಡ ಪದ ಹಾಡುತ್ತೇನೆ. ನನ್ನ ಮನಸ್ಸನ್ನು ನೀನು ಕಾಣೆ! ೮. ಹೆಂಡ ಹೋಗಲಿ! ಹೆಂಡತಿ ಹೋಗಲಿ! ಎಲ್ಲಾ ಕೊಚ್ಚಿಕೊಂಡು ಹೋಗಲಿ! ಪ್ರಪಂಚ ಇರುವ ತನಕ ಮುಂದೆ ಕನ್ನಡ ಪದಗಳು ನುಗ್ಗಲಿ!

## [ಹೆಂಡದ] ಬುರುಡೆಯ ಭಕ್ತ ರತ್ನ

೭. **ಹೆಂಡ** ೧. ಹೆಂಗಸಿಗೆ ಅರಿಸಿನ ಕುಂಕುಮ ಹೇಗೋ ಗಂಡಸಿಗೆ ಹೆಂಡ ಹಾಗೆ! ಹುಟ್ಟಿದ ಮನುಷ್ಯ ರುಂಡ ಎಂದರೆ, ಹೆಂಡದ ಬುರುಡೆಯು ಮುಂಡ! ೨. ಭೂಮಿಯ ಜನಗಳು, ಹೆಂಡದ ಮರಕ್ಕೆ ಹೂವು ಕಾಯಿ ಇದ್ದ ಹಾಗೆ! ಹೆಂಡದ ಮರಕ್ಕೇ ಬತ್ತಿ ಕೊಟ್ಟರೆ (ಸೊನ್ನೆ ಹಾಕಿದರೆ), ಮನುಷ್ಯ ಬದುಕುವುದು ಹೇಗೆ! ೩. ಮನುಷ್ಯ ಎನ್ನುವ ಮೀನು ಬದುಕುವುದಕ್ಕೆ ಹೆಂಡದ ನೀರೇ ಮುಖ್ಯ. ಅನುಭವಸ್ಥನ ಮಾತು ಸುಳ್ಳಾಗದು. ಸತ್ಯ ರತ್ನನ ವಾಕ್ಯ! ೪. ಮನುಷ್ಯನ ಜನ್ಮ

ಬಂದಿದ್ದರೂ ಹೀರದೆಹೋದರೆ ಹೆಂಡ, ಅಂತಹ ಮನುಷ್ಯ ಭೂಮಿಗೆ ಭಾರ! ಬದುಕಿರುವುದು ದಂಡ!

೮. **ಹೆಂಡದ ತೊಂದರೆ** ೧. ಬಿಟ್ಟಿದ್ದೆ ಹೆಂಡ ಅಲ್ಲಿ, ನೆಟ್ಟಗೆ ಬಂದೆ ಇಲ್ಲಿ. ಎಲೇಲೇಲೇ ರಸ್ತೆ! ಏನು ಅವ್ಯವಸ್ಥೆ! ಮೈ ಕೈ ಎಲ್ಲ ಮುಮುರಿ, ಯಾಕೆ ಕುಣಿಯುತ್ತಿ ಕುಮುರಿ (ಹೆಚ್ಚಿಕೊಂಡು)? ಕೊಟ್ಟೆ (ಮೋಸ ಮಾಡಿದೆ)ಯಲ್ಲ, ಗಸ್ತು! [ನೀನು] ಕುಡಿದಿದ್ದೀಯೆ, ರಸ್ತೆ! ೨. ಚಂದ್ರನ ಮುಖವೇಕೆ ಸೊಟ್ಟು? ಅದು! ಬಲಗಣ್ಣು ಛಟ್ಟು (ನಾಶವಾಗಿದೆ)! ಉಳಿದಿರುವ ಎಡದಗಣ್ಣು ಹಚ್ಚಿದ (ಹೋಳುಮಾಡಿದ) ನಿಂಬೆಯ ಹಣ್ಣು. ಏನೋ ಚಂದ್ರ! ಪೆಂಗೆ (ಮೂರ್ಖ)! ನಾಚಿಕೆ ಇಲ್ಲವೆ ನಿನಗೆ? ಕೆಟ್ಟವರು ಕುಡಿಯುತ್ತಾರೆಂದರೆ, ನಿನಗೇಕೆ ಹೆಂಡದ ತೊಂದರೆ? ೩. ನೋಡಲ್ಲಿ ಬೀದಿಯ ದೀಪ—ಗಿರ್ಕಿ (ಭ್ರಮಣ) ಹೊಡೆಯುತ್ತದೆ, ಪಾಪ! ತಿರು ತಿರು ತಿರು ತಿರು ತಿರುಗುತ್ತ ತೂರಾಡುತ್ತದೆ ತೂಗುತ್ತ! ಇಲ್ಲಿರುವ ಒಂದಕ್ಕಾದರೂ ಸ್ವಾಧೀನವಿಲ್ಲ ಜ್ಞಾನ. ಸಾಲಾಗಿ ನಿಂತಿವೆ ನೆಟ್ಟು—ಹೆಂಡ ಕುಡಿದು ಬಿಟ್ಟು! ೪. ದೊಡ್ಡದು ಚಿಕ್ಕದು ಎಲ್ಲಾ—ನೋಡಿದೆಯ ಅವುಗಳ ಗುಲ್ಲ (ಗಲಭೆಯನ್ನು)? ಇವರು ಕುಡಿದವರ ಮಧ್ಯೆ ನನಗೆ ಮಾತ್ರ [ಜ್ಞಾನ] ಶುದ್ಧ! ಹೆಂಡ ಕುಡಿದವರ ನಡುವೆ ನಮಗೆ ಮಾನಕ್ಕೆ ಕಡಮೆ. ಅದಕ್ಕೇ, ಹೆಂಡದ ಅಂಗಡಿಗಾದರೂ ಹಿಂದಿರುಗೋಣ!

೯. **ರತ್ನನ ಯೋಚನೆ** ೧. ಬಯಸಿದ ಸಾಮಾನು ಬೇಕಾದ ಹಾಗೆ ಇರಲಿ—ಇಲ್ಲದಿರಲಿ, ತಾಪತ್ರಯ ಅಂತೂ ತಪ್ಪಿದ್ದಲ್ಲ. ಸುಳ್ಳೆಂದು ಹೇಳುವವನು ಬರಲಿ! ೨. ಬುರುಡೆಯಲ್ಲಿ ಒಂದು ತೊಟ್ಟು [ಹೆಂಡ] ಇರುವವರೆಗೂ ನಿದ್ರೆ ಗಿದ್ರೆ ಬರದು; ಬುರುಡೆ ಕಾಲಿ (ಬರಿದು) ಆಗಿಹೋದರಂತೂ ನಿದ್ರೆ ಬರಲೇ ಬರದು. ೩. ಈ ತಾಪತ್ರಯವನ್ನು ತಳ್ಳಿಹಾಕುವುದಕ್ಕೆ ಏನು ಮಾಡಬೇಕೊ ಕಾಣೆ! ಯೋಚಿಸಿದಷ್ಟೂ ತಗಲಿಕೊಳ್ಳುತ್ತದೆ—ಆ ಯೋಚನೆಗೆ ಒಂದು ಹೊಸ ಸಾಣೆ [ಯೋಚನೆ ಇನ್ನೂ ತೀಕ್ಷ್ಣವಾಗುತ್ತದೆ]. ೪. ಪುನಃ ಒಂದನೆಯ ಚರಣದಂತೆ.

೧೦. **ಈ ಸವಾಲಿಗೆ ಏನು [ಉತ್ತರ] ಹೇಳುತ್ತೀರಣ್ಣ** ೧. ಹೆಂಡದಂಗಡಿಗೆ ಕುಡಿಯುವವರು ಹೋಗುವ ಹಾಗೆ ಹೋಗುತ್ತಾರೆ—ಗಂಡಸರು ದೇವಸ್ಥಾನಗಳಿಗೆ! ದೇವರು ಅವರಿಗೆ ಗುಡಿಯಲ್ಲಿ ಇತ್ತೆಂದರೆ—ನಮಗೇನು? ನಾವು ಕುಡಿಯುವ ಹೆಂಡವೇ ದೇವರು! ೨. ಗುಡಿಯಲ್ಲಿ ಪೂಜಾರಿ ಕಸಿದುಕೊಳ್ಳುತ್ತಾನೆ ಆರುಕಾಸನ್ನು—ಪಡಕಾನೆ (ಹೆಂಡದಂಗಡಿ)ಯ ಮುಸಿಯಪ್ಪನ ಹಾಗೆ. ದೇವರನ್ನು ಕಂಡವರು ಸುಖಪಡುವ ಮಾದರಿ (ರೀತಿ)ಯಲ್ಲಿ ನಾವು ಕೂಡ ಸುಖಪಡುತ್ತೇವೆ ಕುಡಿದು!

೩. ನಮ್ಮನ್ನು ನೋಡಿ ನಗುತ್ತಾರೆ. ಭಕ್ತರಿಗೆ ಬಗ್ಗುತ್ತಾರೆ. ವ್ಯತ್ಯಾಸ ಏನು ನಮಗೂ ಅವರಿಗೂ? ಬೇಸರ ಬೇಡ ಅಣ್ಣ. ಕೇಳಿದ್ದಕ್ಕೆ ಹೇಳಿಬಿಡಿ. ಈ ಸವಾಲಿಗೆ (ಉತ್ತರ ಬರಲೇಬೇಕೆಂದು ನಿರೀಕ್ಷಿಸಿ ಹಾಕುವ ಪ್ರಶ್ನೆಗೆ) ಏನು [ಉತ್ತರ] ಹೇಳುತ್ತೀರಣ್ಣ ?

೧೧. **ಹೆಂಡ ಕುಡಿಯುವವರು ನಾವು** ೧. ದೊಡ್ಡವನಿಗೆ ಹೆಚ್ಚು ಸಂಬಳ ಎಂದರೆ ಚಿಕ್ಕವರ ಕೆಲಸಕ್ಕೆ ಕೋತ (ಸೊನ್ನೆ, ಉಳಿತಾಯ). ಆನೆಯ ಮೈಯನ್ನು ಬೆಳೆಸಬೇಕೆಂದರೆ ಆಹುತಿ—ಬಡಕಲು ಹೋತ! ೨. ಗುಡಿಸಿಲಿಗೆ ಹುಲ್ಲು ಸಾಲದಿದ್ದರೂ ಮಹಡಿಗೆ ಮಹಡಿ ಬಡ್ತಿ (ಏರಿಸುವಿಕೆ). ರೂಪಾಯಿಗೆ ಒಂದು ಕಾಸು ಕಮ್ಮಿ ಬಂದರೆ ಬಡವನ ಮನೆ ಜಡ್ತಿ (ಶೋಧಿಸುವುದು). ೩. ನಾಯನ್ನು ನಾಯೇ ತಿನ್ನುತ್ತದಂತೆ! ಮೀನಿಗೆ ಮೀನೇ ತಿಂಡಿ! ಮನುಷ್ಯನನ್ನು ಮನುಷ್ಯ ತಿನ್ನುತ್ತಾನೀಗ—ಜೀವ ಪೂರ ಹಿಂಡಿ! ೪. ಹೆಂಡ ಕುಡಿಯುವವರು ನಾವು ಹೀಗಲ್ಲ. ಬುರುಡೆಯ ಪೂರ [ಹೆಂಡ] ತಂದು, ಪಕ್ಕದವನ ಕೈಲಿ ಕಾಸು ಇಲ್ಲದಿದ್ದರೆ, ಅವನಿಗೂ ಕೊಡುತ್ತೇವೆ ಶೇಂದಿ (ಸಾರಾಯಿ). ೫. ನಮ್ಮ ತಾಕೆ (ಸಮೀಪಕ್ಕೆ, ಹತ್ತಿರ) ಬಂದರೆ, ಹೇಳಿ ಕೊಡುತ್ತೇವೆ—ದಾನಧರ್ಮಕ್ಕೆ ಅರ್ಥ. ಸಹಜ ಕೇಳಿ ರೇಗಿಕೊಂಡು ಹೋದರೆ, ಕೋಪವೆಲ್ಲಾ ವ್ಯರ್ಥ.

೧೨. **ಸತ್ತಮೇಲೆ ಏನಿದೆಯಣ್ಣ** ೧. ಬೆಳದಿಂಗಳು ರಾತ್ರೆಯಲ್ಲಿ ಈಚೋರಿ (ಈಚೆ ಕಡೆ) ಬಂದಿತೆಂದರೆ, ಈಚಲು ಹೆಂಡ ಚೆಲ್ಲಿದ ಹಾಗೆ ನೆನಪಾಗುತ್ತದೆ. ಆಕಾಶದ ಚಂದ್ರನನ್ನು ಪಡಕಾನೆ (ಹೆಂಡದಂಗಡಿ)ಯ ದೀಪಕ್ಕೆ ಹೋಲಿಸದೆ ಹೋಯಿತೆಂದರೆ ತಪ್ಪಾಗುತ್ತದೆ. ೨. ಕುಡಿದವರು ಮತ್ತು (ಅಮಲು) ಬಂದು ಬೀಳುವ ಹಾಗೆ ಬಿದ್ದಿವೆ—ಮನೆಗಳು ಮರಗಳು ಬೀದಿಯಲ್ಲೆಲ್ಲ. ಪಡಕಾನೆಯ ಜನದ ಹಾಗೆ ಬಡಿದಾಡುತ್ತ ಕಾಯುತ್ತವೆ—ಕಾಗೆಗಳಿಗೆ ಒಸಿ (ಸ್ವಲ್ಪ) ಆದರೂ ಬುದ್ಧಿಯೇ ಇಲ್ಲ. ೩. ಇದು ಕಂಡರೆ ಪಡಕಾನೆ ಕಣ್ಣಿಗೆ ಕಟ್ಟಿದಹಾಗೆ ಆಗುತ್ತದೆ—ತೊಟ್ಟು ಹೆಂಡ ಬೇಕೆಂದರೆ ಬುರುಡೆಯಲ್ಲಿಲ್ಲ. ಹೆಂಡವಿಲ್ಲವೆಂದು ಅಲೆದಾಡುವ ನನ್ನಂತಹ ಪಾಪಿಯನ್ನು ಇದುವರೆಗೆ ಭೂಮಿತಾಯಿ ಕಂಡವಳಲ್ಲ. ೪. ಸುಮ್ಮನೆ ಅತ್ತುಕೊಂಡು ಏನು ಬಂತು? ಇಲ್ಲದ್ದಕ್ಕೆ ಅತ್ತು ಏನು ಬಂತು? ಕಟ್ಟಿದೆ ಕಷ್ಟ ಸುಖ ಹುಟ್ಟಿದೊಡನೆಯೇ! ಕಟ್ಟಿದ್ದನ್ನು ಅಟ್ಟು ಉಂಡು ಅನುಭವಿಸುವುದಕ್ಕೆ ಆಗದಿದ್ದರೆ ಪ್ರಾಣವನ್ನೇ ಕಳೆದುಕೊಳ್ಳಬೇಕು ಒಂದೇಟಿಗೆಯೆ! ೫. ಅಳುಗಿಳುವುದು ಎಲ್ಲವೂ ಹೆಂಗಸಿಗೆ ಒಪ್ಪುತ್ತದೆ—ನಗುತ್ತಿರಬೇಕು ಗಂಡಸರು ಪ್ರಾಣ ಹೋದರೂ! ಬದುಕಿದ್ದರೆ ಯಾವ ಹೊತ್ತಾದರೂ ಪಡಕಾನೆಗೆ ಹೋಗಬಹುದು. ಸತ್ತಮೇಲೆ ಏನಿದೆಯಣ್ಣ? ದೊಡ್ಡ ಸೊನ್ನೆಯೇ!

**೧೩. ಬೇವಾರ್ಸಿಗೆ** ೧. ತಿಥಿ ಮಾಡಿಸುವವರಿಗೆ ಏನು ಗೊತ್ತಿದೆಯೊ— ಚೆಡ್ಡಿ ಹೊಲಿಯುವ ಕೆಲಸ? ಓದಿಸುವ ಐಗಳು (ಉಪಾಧ್ಯಾಯರು) ಕಟ್ಟಿಕೊಳ್ಳುತ್ತಾರೆಯೆ— ಸೂಳೆಯ ಕಾಲಿನ ಗೊಲಸನ್ನು ? ೨. ಬೇವಾರ್ಸಿ ! ನಿನಗೆ ಏನು ಗೊತ್ತಿದೆಯೊ— ಹೆಂಡ ಕುಡಿಯುವ ಬಾಬತ್ತು (ವಿಚಾರ) ? ಹೇಸರಗತ್ತೆಗೆ ಆದಹಾಗೆಯೇ ನಿನಗೂ ವಯಸ್ಸು ದಬ್ಬಿತು (ಕಳೆಯಿತು) ! ೩. ಹೆಂಡ ಕುಡಿಯುವುದು ಕೆಟ್ಟದು. ಗೊತ್ತು. ನಿನ್ನ ಯಾರು ಕೇಳಿದರು ಅದನ್ನು ? ಹತ್ತಿರ ಬಾ ಎಂದರೆ ಹತ್ತುತ್ತೀಯಾ ಮೇಲೆ? ನಾನು ಯಾರು ಗೊತ್ತೊ ? ರತ್ನ ! ೪. ಬಾಯಿಗೆ ಬೀಗ ತಗುಲಿಸಿಕೊಂಡು ಬರೆಯುವುದಿದ್ದರೆ ಬರೆದುಕೊ. ಮುಗ್ಗಲು (ಹಳಸಿದ್ದು) ಕಂತೆ (ಕೆಲಸಕ್ಕೆ ಬಾರದುದು) ಬಿಚ್ಚುವುದಿದ್ದರೆ, ನೀನು ಬಂದ ಹಾಗೆಯೇ ತಿರುಗಿಕೊ.

**೧೪. ರತ್ನನ ಖುಷಿ (ಸಂತೋಷ, ಆನಂದ)** ೧. ಹೆಂಡ ಮುಟ್ಟಿದಾಗಲೆಲ್ಲ ನನಗೆ ಏನೋ ಖುಷಿಯಾಗುತ್ತದೆ. ಕುಡಿಕನ ಮಾತು ಅಂದರೆ ಹಾಗೇ ಅಲ್ಲ! ನಗು ಉಕ್ಕಿ ಬರುತ್ತದೆಯೆ? ೨. ಈಚಲ ಮರದಲ್ಲಿ ಮಲಗಿದ್ದ ಹೆಂಡ ಕಟ್ಟಿದ ಮಡಿಕೆ (ಮಣ್ಣುಪಾತ್ರೆ)ಗೆ ಹರಿದು, ಭಾರಿ (ದೊಡ್ಡ) ಪೀಪಾಯಿನಲ್ಲಿ ಇಳಿದುಕೊಂಡು ತುಂಬಿ ಕೊಳ್ಳುತ್ತದೆ ಸುರಿದು. ೩. ಅಲ್ಲಿಂದ ಇಲ್ಲಿಗೆ ಇಲ್ಲಿಂದ ಅಲ್ಲಿಗೆ ಪೀಪಾಯಿನಲ್ಲಿ ಉರುಳಿಯಾಡಿ, ಕುಡಿಕನ [ಹೆಂಡದ] ಬುರುಡೆಯಲ್ಲಿ ಹುಟ್ಟಿಕೊಳ್ಳುತ್ತದೆ! ಎಂತಹ ಜನ್ಮ, ನೋಡು! ೪. ರಬ್ಬರು ಚೆಂಡಿನ ಹಾಗೆ ಅಲ್ಲಿಂದ ಇಲ್ಲಿಗೆ ಹೆಂಡ ಉರುಳಾಡುತ್ತಿದ್ದು, ಕೊನೆಯಲ್ಲಿ ಶಾಂತಿ ಕಂಡುಕೊಳ್ಳುತ್ತದೆ ಕುಡಿಕನ ಹೊಟ್ಟೆಯಲ್ಲಿ ಬಿದ್ದು. ೫. ಸಿಕ್ಕಿದ ದೇಹ ತಬ್ಬಿ ಹಿಡಿದುಕೊಂಡು ಆತ್ಮ ಅಲೆಯುವ ಹಾಗೆ ಹೆಂಡ ಅಲೆದಿದ್ದನ್ನು ನೆನಪು ಮಾಡಿಕೊಂಡರೆ— ಮೈ ಝುಂ ಎನ್ನುತ್ತದೆ ನನಗೆ. ೬. ಬ್ರಹ್ಮ ಎನ್ನುವ ಅದರಲ್ಲಿ ಆತ್ಮ ಬೆರೆತುಕೊಂಡು ಹೋಗುವಹಾಗೆ, ಬೆಸೆದುಕೊಳ್ಳುತ್ತದೆ ಮೈಯಲ್ಲಿ ಹೆಂಡ— ಗುರುತೇ ಗೊತ್ತಾಗದ ಹಾಗೆ. ೭. ಹೆಂಡ ಮುಟ್ಟಿದಾಗಲೆಲ್ಲ ನನಗೆ ಏನೋ ಖುಷಿ ಯಾಗುತ್ತದೆ. ಖುಷಿಗೆ ಕಾರಣ ಗೊತ್ತಾಯಿತೀಗ. ಕುಣಿಯುವ ಹಾಗೆ ಆಗುತ್ತದೆ.

**೧೫. ಸಮಾಧಾನ** ೧. ಕುಡಿದುಬಿಟ್ಟು ಮೋರಿ(ಬಚ್ಚಲು)ಯಲ್ಲಿ ನಾನು ಬಿದ್ದುಕೊಂಡಿದ್ದೇನೆಂದು ಹೇಳಿ ಎಲ್ಲರೂ ನಗುತ್ತಾರೆ ಸುಮ್ಮ ಸುಮ್ಮನೆಯೇ. 'ಎಲ್ಲರ ಹಾಗೆಯೇ ಮನುಷ್ಯ— ಇವನೇನೊ ಒಸಿ (ಸ್ವಲ್ಪ) ತಪ್ಪಿದ' ಎನ್ನುವುದಿಲ್ಲ. ಬೆಪ್ಪುಗಳಿಗೆ ಏನು ಹೇಳೋಣ! ೨. ಆಕಾಶದಲ್ಲಿ ಸೂರ್ಯ ಇದ್ದಾನೆ—ದೊಡ್ಡ ಮನುಷ್ಯ —ವಾಸ್ತವ (ಸಹಜ)— ಗೃಹಸ್ಥನಂತೆ ಹಗಲೆಲ್ಲ ತಿರುಗಾಡುತ್ತಾನೆ. ಸಂಜೆ ಆಯಿತೆಂದರೆ ಸಾಕು— ಪಶ್ಚಿಮದೂರಾಚೆಯಲ್ಲಿ (ಮಡಗಿ) ಇಟ್ಟಿರುವ ಪಡಕಾನೆಗೆ ಓಡಿಹೋಗುತ್ತಾನೆ. ೩. ಪಟ್ಟಾಗಿ (ತುಂಬಾ) [ಹೆಂಡ] ಹೊಡೆದುಬಿಟ್ಟು ತೂರಾಡುತ್ತ ತೂಗು

ತ್ತಾನೆ! ಕಣ್ಣುಗಳನ್ನು ಕೆಂಪಗೆ ಮಾಡಿ ತೇಲಿಸುತ್ತಾನೆ! ನನ್ನನ್ನು ಅಣಕಿಸುವ ನರ ಮನುಷ್ಯ ಸೂರ್ಯನಿಗೆ ಬಾಯಿಬಿಟ್ಟು, ಅದಕ್ಕಂತೆ ಇದಕ್ಕಂತೆ ಹೋಲಿಸುತ್ತಾನೆ. ೪. ತೂರಾಡುತ್ತ ಮೋರಿ (ಬಚ್ಚಲಿ)ಗೆ ಮಗಚುತ್ತಾನೆ ಸೂರ್ಯಪ್ಪ—ಕೆಸರೆಲ್ಲ ಛಿಲ್ಲೆಂದು ಮೇಲೆ ಹಾರುತ್ತದೆ. ಅದನ್ನು ಕಂಡು 'ಕತ್ತಲಾಯಿತು, ಕತ್ತಲಾಯಿತು' ಎಂದುಕೊಂಡು, ಬೆಪ್ಪುತಕಡಿ (ಮೂರ್ಖ) ಲೋಕವೆಲ್ಲ ಕೂಗುಹಾಕುತ್ತದೆ. ೫. ಚಿಕ್ಕವರು ಸಿಕ್ಕಿದ್ದಾರೆ ಅಣ್ಣ, ಎಲ್ಲರೂ ನಗುವುದಕ್ಕೆ! ದೊಡ್ಡವರು ಹೇಗೆ ಆಡಿದರೂ ಎಲ್ಲವೂ ಸೈ (ಸರಿ)! ಲೋಕವೇ ಹೀಗಿದೆ. ನಾನು ಏಕೆ ದುಃಖಪಡಲಿ—ಮುನಿಯು ನಿಗೂ ಹೆಂಡಕ್ಕೂ ಬೋಲೋರೆ (ಹೇಳೋಲೋ) ಜೈ!

೧೬. **ಪ್ರಾರ್ಥನೆ** ೧. ಬ್ರಹ್ಮ! ನಿನಗೆ ಜೋಡಿಸುತ್ತೇನೆ ಹೆಂಡ ಮುಟ್ಟಿದ ಕೈಯನ್ನು! ಭೂಮಿಯ ಉದ್ದಕ್ಕೂ ಬಗ್ಗಿಸುತ್ತೇನೆ ಹೆಂಡ ತುಂಬಿಕೊಂಡ ಮೈಯನ್ನು. ೨. ಬುರು ಬುರು ನೊರೆ ಬಿಸಿಯುವಂತಹ ಒಳ್ಳೆಯ ಹುಳಿ ಹೆಂಡ ಕೊಡುತ್ತೇನೆ. ನನ್ನ ಪ್ರಾರ್ಥನೆ ಕೇಳು—ಸರಸ್ವತಮ್ಮನ ಗಂಡ! ೩. ಸರಸ್ವತಮ್ಮ ಮುನಿಸಿಕೊಂಡು ಇದ್ದಾಳೆ—ನೀನಾದರೂ ಒಸಿ (ಸ್ವಲ್ಪ) ಹೇಳು. ಕುಡಿದುಬಿಟ್ಟು ಹಾಡಿದರೆ ತೊದಲು ತ್ತದಣ್ಣ ನಾಲಗೆ—ಬಹಳ ಗೋಳು! ೪. ಅಕ್ಷರವನ್ನೆಲ್ಲ ಸರಸ್ವತಮ್ಮ ಪಟ್ಟಾಗಿ (ಬಿಗಿಯಾಗಿ) ಹಿಡಿದುಕೊಂಡು ಬಿಟ್ಟು, ಮುನಿಯು ಹೆಂಡ ಬಿಡುವ ಹಾಗೆಯೇ ಬಿಡು ತ್ತಾಳೆ—ಅವಳ ಕೈ ಗಟ್ಟಿ! ೫. ಮುನಿಯುನಿಗಾದರೂ ಕಾಸು ಹೋಗುತ್ತದೆ—ಹೆಚ್ಚಿಗೆ ಹೆಂಡ ಬಿಟ್ಟರೆ; ಸರಸ್ವತಮ್ಮನಿಗೆ ಏನು ಹೋಗುತ್ತದೆ—ಮಾತು ಸಲೀಸಾಗಿ (ಸರಿಯಾಗಿ) ಕೊಟ್ಟರೆ? ೬. ನನಗೆ ನೀನು ಲಾಯರಾಗಿ (lawyer) ನನ್ನ ಕೇಸು (case) ಗೆದ್ದು ಗಿದ್ದು ಕೊಟ್ಟರೆ, ಮಾಡುತ್ತೇನಣ್ಣ ನಿನ್ನ ಹೊಟ್ಟೆಯನ್ನು—ಹುಳಿ ಹೆಂಡಕ್ಕೆ ಪೊಟ್ಟರೆ! ೭. ಕಮಲದ ಹೂವಿನ ಕುರ್ಚಿಯ ಮೇಲೆ ಜೋಕಾಗಿ ಕುಳಿತುಕೊ ನೀನು! ನಾಲ್ಕೂ ಬಾಯಿಗೂ ನಾಲ್ಕು ಬುರುಡೆ ಹೆಂಡ ತರುತ್ತೇನೆ ನಾನು! ೮. ಸರಸ್ವತಮ್ಮನಿಗೆ ಹೇಳುವುದಿಲ್ಲ—ನೀನೇನೂ ಹೆದರಿಕೊಳ್ಳಬೇಡ. ಕೇಳಿದ ವರವನ್ನು ಹೊಂದಿಸಿಕೊಟ್ಟರೆ—ತೆಗೆದುಕೊ! ಹೆಂಡದ ಫೇಡ (ಹೆಂಡದ ಪೀಪಾಯಿನ ಅಡಿಯ ಹೆಪ್ಪುಗಟ್ಟಿದ ಗಸಿ)!

೧೭. **ಸಂನ್ಯಾಸಿ ರತ್ನ** ೧. ಹಿಂದೆ ಒಬ್ಬ ಬೌದ್ಧ ಸಂನ್ಯಾಸಿ, ಮರದಡಿ ತನ್ನ ಬಟ್ಟೆ ಹಾಸಿ, ಕುಳಿತಿದ್ದ ಪದ್ಮಾಸನ ಹಾಕಿ, ಕಣ್ಣು ಮುಚ್ಚುವುದು ಒಂದೇ ಬಾಕಿ (ಉಳಿದಿತ್ತು). ೨. ಕಾಲಿಗೆ, ಅವನ ಮುಂದೆ ಆಗ, ತೊದಲು ಬಂದ ಹಾಗೆ ಹೆಣ್ಣು ಒಬ್ಬಳು ಹೋದಳು—ಘಂ ಎಂದು ವಾಸನೆ ಸುಳಿದಹಾಗೆ, ಫಳ್ಳೆಂದು ಮಿಂಚು ಹೊಳೆದ ಹಾಗೆ. ೩. ತನಗೆ ಕಣ್ಣು ಮಾಡಿದವಳನ್ನು ಕುರಿತು: 'ಚೆಲುವಿಸ ಈ

ದೇಹದಲ್ಲಿ ಭರ್ತಿ (ಪೂರ) ಹೊಲಸೇ' ಎಂದು ಸಂನ್ಯಾಸಿ 'ಛಿ' ಎಂದ—ಮನದಲ್ಲಿ ಹೇಸಿ. ೪. 'ಹೊರಗಿನ ಅಲಂಕಾರ ಥಳಕು (ಡಂಭಾಚಾರ), ಒಳಗಿನದನ್ನು ಕಂಡರೇ ಬೆಳಕು' ಎಂದು ಆ ಬೌದ್ಧ ಸಂನ್ಯಾಸಿ, ಹೀರುತ್ತಿದ್ದ ಸತ್ಯವನ್ನು ಶೋಧಿಸಿ. ೫. ನಾನು ಕೂಡ ಹಾಗೆಯೇ ಸಂನ್ಯಾಸಿ. ಮೂರುಹೊತ್ತೂ ಹೆಂಡವನ್ನು ಮೂಸಿ, ಮರೆತುಬಿಡುತ್ತೇನೆ ಬುರುಡೆಯನ್ನು ತುರ್ತು (ಬೇಗ). ಒಳಗಿನ ಒಂದು ಹೆಂಡವೇ ನನಗೆ ಗುರುತು (ಧ್ಯಾನ ಮಾಡುವ ಗುರಿ).

೧೮. **ಗುಟ್ಟು** ೧. ನಾನು ಕುಡಿದು ಹಾಡುವ ಪದಗಳನ್ನೆಲ್ಲ ಬೀದಿಯವರು (ಸಾಮಾನ್ಯ ಜನಗಳು) ಇಷ್ಟೊಂದು ಹೊಗಳುವುದಕ್ಕೆ ಏನು ಕಾರಣವೆಂದರೆ—ಹೇಳುತ್ತೇನೆ, ಚೆನ್ನಾಗಿ ಕೇಳು. ೨. ವಿದ್ಯೆಗೆಲ್ಲ ದೇವರಾಗಿದ್ದಾಳೆ ಅವಳು—ಆ ಸರಸ್ವತಮ್ಮ. ವೀಣೆ ಹಿಡಿದು ಅವಳು ಹಾಡಿದರೆ, ನಾನು ಕುಡಿದು ಹಾಡುತ್ತೇನಮ್ಮ! ೩. ಸರಸ್ವತಮ್ಮನ ಎಡದೋಳೂ ನೋಡು, ನನ್ನ ಎಡಗೈಯನ್ನೂ ನೋಡು. ಅವಳ ತಾವು (ಹತ್ತಿರ) ಇದ್ದರೆ ವೀಣೆಯ ಬುರುಡೆ, ನನಗಿದೆ ಹೆಂಡದ ಬುರುಡೆ. ೪. ಬುರುಡೆಯ ಮಹತ್ವ ನೋಡಿದೆಯೇನಣ್ಣ—ಹೇಗಿದೆ ಅದರದು ಥಳಕು! ಅದಕ್ಕೇ ಅಮ್ಮನ ವೀಣೆಯ ಹಾಗೆ ನನ್ನ ಮಾತಿನ ಪಲುಕು (ನುಡಿಯ ಒಂದು ರೀತಿ)!

## ಮುನಿಯನ ಗಿರಾಕಿ (ಸಾಮಾನು ಕೊಳ್ಳುವವ) ರತ್ನ

೧೯. **ಬಹಳ ಜಿಪುಣ ಮುನಿಯ** ೧. ಊರಾಚೆ ಪಡಕಾನೆ ಇಟ್ಟಿದ್ದಾನೆ ಮುನಿಯ. ಬಹಳ ಜಿಪುಣ ಪಡಕಾನೆ ಯಜಮಾನ ಮುನಿಯ. ಮನೆಯ ತಾಕೆ (ಹತ್ತಿರ) ಯಾರು ಹೋದರೂ ಬೆದರುತ್ತಾನಾ ಮುನಿಯ. ಯಾರು ಭಿಕ್ಷೆ ಬೇಡುತ್ತಾರೆಂದು ಹೆದರುತ್ತಾನಾ ಮುನಿಯ. ಊರಾಚೆ ಪಡಕಾನೆ ಯಜಮಾನ ಮುನಿಯ—ನಮ್ಮ ಮುನಿಯ, ನಮ್ಮ ಮುನಿಯ, ಜಿಪುಣ ನಮ್ಮ ಮುನಿಯ. ೨. ಮನೆಯ ತಾಕೆ (ಹತ್ತಿರ) ಯಾರು ಬರಲಿ—ಕೂಗುತ್ತಾನೆ ಅವನು ಕಿರಲಿ (ಗಟ್ಟಿಯಾಗಿ ಕಿರಚಿ); ಬಂದವರಿಗೆ ಕೇಳುವ ಹಾಗೆ ಕೂಗುತ್ತಾನೆ ಆ ಮುನಿಯ, ಮನೆಯವರನ್ನು ಬಯ್ಯುವ ಹಾಗೆ ಕೂಗುತ್ತಾನಾ ಮುನಿಯ: 'ಬೋರಯ್ಯ ತಂದುಕೊಟ್ಟನೆ ತೆಗೆದುಕೊಂಡು ಹೋದ ನೂರನ್ನು? ಮನೆಗೆ ಬೇರೆ ಹಾಕಬೇಕು ಇನ್ನೂ ಮಂಗಳೂರು ಹೆಂಚು ನೂರನ್ನು. ತೆಗೆದುಕೊಂಡುಹೋದ ಮಕ್ಕಳು ಇನ್ನೂ ಬಡ್ಡಿ ಕೊಡದಿರಲಿ, ಉಪ್ಪಿಗೂ ಹುಳಿಗೂ ಕಾಸು ಎಲ್ಲಿಂದ ತರಲಿ? ಪ್ರಪಂಚ ಕೆಟ್ಟುಹೋಯಿತು—ಬಹಳ ಪೂರ ಹೋಯಿತು. ಹೀಗಿದ್ದರೆ ನಾವೆಲ್ಲ ಬಾಳಿ ಬದುಕಿದ ಹಾಗಾಯಿತು. ತೆಗೆದುಕೊಂಡವರು ತೆಗೆದುಕೊಂಡ ಹಾಗೆ ತಿಂದುಕೊಂಡು ಹೋಗುತ್ತಿರಲಿ, ಗಂಟಲೆಲ್ಲ ಕಟ್ಟಿಹೋ

ಯಿತು ಇವರ ಹತ್ತಿರ ಪ್ರೊರಲಿ (ಮೇಲಿಂದ ಮೇಲೆ ಕೂಗಿಕೊಂಡು). ಕಟ್ಟಬೇಕಿನ್ನು ಮಂಡಿ (ದೊಡ್ಡ ಅಂಗಡಿ)ಗೆ ಸಾವಿರದೆಂಟುನೂರು. ಮತ್ತೆ ಬೇಕೆ ಬ್ಯಾಂಕಿಗೆ (Bank) ಇನ್ನು ಎರಡುಸಾವಿರದ ನೂರು. ಎಲ್ಲಿಂದ ತರಬೇಕೊ ದೇವರಿಗೇ ಬೆಳಕು (ದೇವರಿಗೇ ಗೊತ್ತು)! ಮಿಕ್ಕವರಿಗೇನು ಗೊತ್ತು ಈ ಚೇಳಿನ ಚಳಕು (ಬಾಧೆ)! ಕೇಳಿದವರಿಗೆ ಕೊಟ್ಟತೆಂದರೆ ಅಸಲೇ ಸ್ವಾಹ! ಇನ್ನು ಯಾರನ್ನು ಕೇಳಬೇಕೋ ಬಡ್ಡಿ? ಹಣ್ಣು ಹ್ಣು! ತೆಗೆದುಕೋಂಡವರು ಕೆರಡಿರಲಿ ಬೇಗ ಬೇಗ ತಂದು, ಸತ್ತಾದರೂ ಹೋಗುತ್ತೇನೆ ವಿಷ ಗಿಷ ತಿಂದು.' ೩. ಹೆಂಡದಂಗಡಿ ಮುನಿಯಣ್ಣ! ಪಡಕಾನೆ ಮುನಿಯ! ಏನು ಹೇಳಲಿ ನೀನು ಕೂಡಿಸುವ ಬಹಳ ಬಹಳ ಪುಣ್ಯ! ಬೇಡಿದವರಿಗೆ ನೀಡದಿದ್ದರೆ ಪಾಪ ವೆಂದು ಎಂದರೆ, ಬೇಡುವ್ರದಕ್ಕೂ ಮುಂಚೆಯೆ ಬಾಗಿಲು ಇಕ್ಕು(ಮುಚ್ಚು)ತ್ತ ಬಂದರೆ, ಏನು ಹೇಳಲಿ ಮುನಿಯಣ್ಣ ನೀನು ಕೂಡಿಸುವ ಪುಣ್ಯ? ಜಿಪುಣ ಎಂದರೆ ನಿನ್ನನ್ನು ಬಿಟ್ಟರೆ ಬೇರೆ ಇಲ್ಲ ಮುನಿಯ!

೨೦. **ನಮ್ಮ ದೇವರು ಮುನಿಯ** ೧. ಕೈಮುಗಿದು ಕರ್ಪೂರ ಹಚ್ಚಿ, ಕಾಸು ಕೊಟ್ಟು ತೆಂಗಿನಕಾಯಿ ಚಚ್ಚಿ (ಒಡೆದು) ಅಡ್ಡಬಿದ್ದರೆ, ಕಲ್ಲೆಲ್ಲ ದೇವರೇ! ಇಲ್ಲದಿದ್ದರೆ —'ಜಾಕರ್ರ್ ಅಪ್ರೆ' (ಮುಂದೆ ಹೋಗಿ ಬಾರೋ)! ೨. ಮುನಿಯಣ್ಣ ಎಂದುಕೊಂಡು ಬಂದು, ಝಲ್ಲಝಲ್ಲನೆ ರೂಪಾಯಿಗಳು ತಂದು ಸುರಿಯುತ್ತಿದ್ದರೆ, ಕೊಡುತ್ತಾನೆ ಹೆಂಡ! ಇಲ್ಲದಿದ್ದರೆ ತರುತ್ತಾನೆ ದಂಡ (ದೊಣ್ಣೆ)! ೩. ಮುನಿಯನಿಗೂ ಆ ದೇವ ರಿಗೂ ವ್ಯತ್ಯಾಸವೇನು ಹೇಳು ನೋಡೋಣ! ಕಾಯಿ ಕೊಟ್ಟರೆ ದೇವರು ಪ್ರಚಂಡ, ಕಾಸು ಕೊಟ್ಟರೆ ಮುನಿಯನ ಹೆಂಡ! ೪. ದೇವರಂತೂ ಕೊಡಲಿ ಕೊಡದಿರಲಿ, ಮಾಡುತ್ತಾರೆ ಅವನಿಗೆ ನಮಸ್ಕಾರ; ಮುನಿಯಣ್ಣ ಹೆಚ್ಚು ಅಳತೆ ಬಿಡದಿರಲಿ, ಮಾಡುತ್ತಾರೆ ಅವನಿಗೆ ಸಂಸ್ಕಾರ! ೫. ಮುನಿಯಣ್ಣ! ನೀನು ನಮಗೆ ದೇವರು! ನಾವಂತೂ ದಿನವೂ ಬರುವವರು. ಕೊಡದಿದ್ದರೆ ಹೆಚ್ಚು ಅಳತೆ ಹೆಂಡ, ನಾವು ಕೊಡುವ ದುಡ್ಡು ನಿನಗೆ ದಂಡ!

೨೧. **ಭಿಕ್ಷೆ** ೧. ನನ್ನ ಹೆಂಡತಿ ನುಗ್ಗಿದಳು, ಜೇಬಿಗೆ ಕೈ ಹಾಕಿದಳು, ಮುನಿ ಯಣ್ಣ! ಹೆಂಡಕ್ಕೆ ಕಾಸಿಲ್ಲ; ಶ್ರೀಕೃಷ್ಣ ನಿಂತಿದ್ದಾನೆ, ಕುಚೇಲ ಬಂದಿದ್ದಾನೆ, ಏನಾದರೂ ಕೊಡಲೇಬೇಕಲ್ಲ. ೨. ನಿನ್ನ ಹೆಂಡ ಬೇಡುತ್ತೇನೆ, ಕೊಡದಿದ್ದರೆ ಹಾಡು ತ್ತೇನೆ, ಮುನಿಯ, ನಿನ್ನ ಮೇಲೆ ಒಂದು ಮಟ್ಟು! ಬೇವಾರ್ಸಿ ಬಂದಿದ್ದಾನೆ, ಬರೆದು ಕೊಳ್ಳುತ್ತ ನಿಂತಿದ್ದಾನೆ, ಮುನಿಯ ನಿನ್ನ ಗುಟ್ಟೆಲ್ಲ ರಟ್ಟು (ಬಯಲು)! ೩. ಬೇಡು ತ್ತೇನೆಂದು ಹೇಳಿದರೆ, ನಿನ್ನ ಹೆಂಡ ಕೇಳಿದರೆ, ಧರ್ಮಕ್ಕೇನು ಕೇಳುವುದಿಲ್ಲೇಳು! ನರಮನುಷ್ಯ ಎಂದವನು, ಭಿಕ್ಷೆಗೆ ಕೈ ತಂದವನು, ಕತ್ತೆ ನಾಯಿಗಳಿಗಿಂತ ಕೀಳು.

೪. ನಾನು ಸುಮ್ಮನೆ ಬೇಡುವುದಿಲ್ಲ, ನೀನು ಸುಮ್ಮನೆ [ಭಿಕ್ಷೆ] ನೀಡುವುದಿಲ್ಲ, ಕಾಸಿಗೂ ನಿನಗೂ ಪ್ರಾಣ! ಚಾಕ್ರಿ (ಕೆಲಸ) ನನಗೇನಾದರೂ ಕೊಟ್ಟು ಜೀತಕ್ಕೆ (ಸಂಬಳಕ್ಕೆ) ಪೂರ (ತುಂಬ) ಹೆಂಡ ನೀನು ಕೊಟ್ಟಿತೆಂದರೆ, ಜಾಣ! ೫. ನಿನಗೇನಾದರೂ ಬೇಕಿದ್ದರೆ, ನನ್ನನ್ನು ಕೆಲಸಕ್ಕೆ ಹಾಕಿದರೆ, ತಿಕ್ಕುತ್ತೇನೆ ಹೆಂಡದ ಪೀಪಾಯನ್ನು (barrel)! ಇಲ್ಲದಿದ್ದರೆ ಗಲ್ಲ(ವ್ಯಾಪಾರದಲ್ಲಿ ಬಂದ ಹಣವನ್ನು ಹಾಕುವ ಪೆಟ್ಟಿಗೆ)ದಲ್ಲಿ ಬಿದ್ದಿದ್ದನ್ನು ಒಂದು ಹಳ್ಳದಲ್ಲಿ ಹೂಳುತ್ತೇನೆ—ನೀನು ತಂದ ರೂಪಾಯನ್ನು. ೬. ನರಮನುಷ್ಯ ಎಂದು ಹುಟ್ಟಿದವನು, ಪಕ್ಕದವರ ಕಷ್ಟಕ್ಕೆ ಆಗದವನು ಜೀವದ ಹೆಣ! ಭೂಮಿಗೆ ಅವನು ಭಾರ! ತೆಗೆದುಕೊಂಡು ಬಾ ಮುನಿಯ ಹೆಂಡವನ್ನು! ತುಂಬು ನನ್ನ ಬುರುಡೆಯನ್ನು! ನಿನ್ನ ಕತ್ತಿಗೆ ಪೀಪಾಯಿಗಳ ಹಾರ!

**೨೨. ಇದರಲ್ಲಿ ಇದೆ ಮರ್ಮ** ೧. ಬೆನ್ನಮೇಲಿನ ಪರಟು ಹೋದರೆ ಹೋಯಿತು, ಬೆನ್ನ ಮೇಲಿದೆ ಚರ್ಮ! ಹೆಂಡ ತೆಗೆದುತಾ! ಚರ್ಮ ಹೋದಮೇಲೆ [ಸತ್ತಮೇಲೆ] ಹುಟ್ಟುತ್ತದೆಯೋ ಒಂದು ದಮ್ಡಿ (ಬಿಡುಕಾಸು)! ೨. ಬಡವರು ಬದುಕುವ ದಾರಿಯೆಂದು ಎಂದರೆ, ಈ ಮಾತಿನಲ್ಲಿ ಇದೆ ಮರ್ಮ (ಸತ್ವ)! ಕುಡಿಕನ ಮಾತು ಎಂದರೆ, ಎಂಥದಣ್ಣ, ಕಾಣದ ಕಣ್ಣಿಗೆ ಸುರ್ಮ (ಕಣ್ಣಿನ ಕಶ್ಮಲಗಳನ್ನು ನೀಗುವ ಅಂಜನ)!

**೨೩. ಮುನಿಯನ ಬೋಣಿ** (ಮೊತ್ತಮೊದಲ ವ್ಯಾಪಾರ) ೧. ಮನುಷ್ಯ ಎಲ್ಲಿಂದ ಎಲ್ಲಿಗೆ ಹೋದರೂ, ಬಾಯಿ ಇತ್ತೆಂದರೆ ಬದುಕಿದ! ಮೆತ್ತಗೆ (ಸಾಧುವಾಗಿ) ಇತ್ತೆಂದರೆ, ಆಳಿಗೆ ಒಂದು ಕಲ್ಲು! ತೆಗೆದುಕೊ! ಹಿಡಿದು ತದಕಿದ (ಬಡಿದುಹಾಕಿದ)! ೨. ಹಿಡಿದು ದಬಾಯಿಸಿ (ಬಲಪ್ರದರ್ಶನಮಾಡಿ) ಗಸೀಟ್ರೀ (ಒದೆ ಕೊಡೋ) ಎಂದರೆ, ಬಂತು ತುಂಬಿದ ದೊನ್ನೆ! ಒಳ್ಳೆಯ ಮಾತಿನಲ್ಲಿ ತೆಗೆದುತಾ ಎಂದರೆ ಮುಖಕ್ಕೆ ಮೂರು ನಾಮ! ಸೊನ್ನೆ! ೩. ಲೋಕದ ಚಾಳಿ (ನಡತೆ) ಎಂದೆಂದರೆ— ಮುನಿಯ, ಬಹಳ ಇಕ್ಕಟ್ಟಿನ (ಅಗಲ ಕಿರಿದಾದ) ಓಣಿ (ಸಂದು)! ಈ ಚಿಕ್ಕ ಓಣಿಯನ್ನು ಬಡಾಯಿಸು (ವಿಸ್ತರಿಸು)ವುದಕ್ಕೆ ನಿನ್ನದು ಆಗಲಣ್ಣ ಬೋಣಿ (ಮೊದಲನೆಯ ವ್ಯಾಪಾರ)!

**೨೪. ಈ ಮೋಸ ದೋಷವಲ್ಲ** ೧. ಹಗಲೆಲ್ಲ ಬೆವರು ಹರಿಸಿ, ಜೀತ (ಸಂಬಳ) ಕೆರೆದುಕೊಂಡು, ಹಟ್ಟಿ(ಮನೆ)ಗೆ ನಾ ಬಂತೆಂದರೆ ಮೈ ಕೈ ಮುರಿದುಕೊಂಡು, ಜೇಬೆಲ್ಲ ಜಡ್ತಿ (ಶೋಧನೆ) ಮಾಡುತ್ತಾಳೆ ನನ್ನ ಹೆಂಡತಿ. ೨. ಒಂದು ದಫ (ಸಲ) ತಂದ ಜೀತ ಪೂರ ಕೊಟ್ಟುಬಿಟ್ಟು, ಹೆಂಡಕ್ಕೆ ಒಂಬತ್ತು ಕಾಸನ್ನು ಕೇಳಿದರೆ ಬಾಯಿಬಿಟ್ಟು, ಪೊರಕೆಯನ್ನು ಎತ್ತಿ ಹಿಡಿದು ಬಡಿದಿದ್ದಾಳೆ ನನ್ನ ಹೆಂಡತಿ. ೩. ಹೆಂಡವೇ ನಮ್ಮ ದೇವರು, ತ್ರಿಮೂರ್ತಿ ಹೆಂಡ; ನಮ್ಮನ್ನು ಹುಟ್ಟಿಸಿ ಬದುಕಿಸುವುದು ಸಾಯಿಸುವುದು

ಹೆಂಡ. ಹೆಂಡ ಬಿಟ್ಟ್‌ತೇಂದರೆ ನಮ್ಮ ಜೀವಕ್ಕೆ ತ್ರೊಂದರೆ. ४. ಕಲಿಗಾಲ ಶನಿಗಾಲ! ಬದುಕುವುದಕ್ಕಾಗುವುದಿಲ್ಲ! ಸಾಚಾ (ಸತ್ಯವಂತ) ಮನುಷ್ಯರಿಗಂತೂ ಉಳಿಗಾಲವೇ ಇಲ್ಲ! ಅದರಿಂದ ಒಂದು ಹಿಕ್ಮತ್ (ಉಪಾಯ) ಮಾಡಿದೆ! ಬಹಳ ಗಮ್ಮತ್ (ಷೋಕು)! ೫. ಹೆಂಡಕ್ಕೊಂದು ಎರಡಾಣೆ ಕೂದಲಿನಲ್ಲಿ ಸಿಕ್ಕಿಸಿ, ಅಟ್ಟ (ಮನೆ)ಗೆ ಬಂದ ತಕ್ಷಣ ಜೇಬು ಒದರಿ ಬಗ್ಗಿಸಿ, ಹೆಂಡತಿಗೆ ಮೋಸ ಮಾಡಿದರೆ [ಅವಳಿಗೆ] ಸಂತೋಷ! ೬. ಮೋಸ ನನಗೆ ಮಾಡೆಂದು ಬೇಡುತ್ತದೆ ಜಗತ್ತು. ಅದಕ್ಕೇ ಹಿಡಿದಿದ್ದೇನೆ ಪಟ್ಟಾಗಿ (ಬಲವಾಗಿ) ಈ ಹಿಕ್ಮತ್ತು (ಉಪಾಯ). ಈ ಮಾದರಿಯ ಮೋಸ ಆಗದಣ್ಣ ದೋಷ!

**೨೫. ನಾಳೆ** ೧. ಹೆಂಡತಿ ಊರಿನಲ್ಲಿಲ್ಲ ಮುನಿಯ. ಊರಿಗೆ ಹೋಗಿದ್ದಾಳೆ ಜಾಣೆ! ಜೀತ (ಸಂಬಳ) ತುಂಬಾ ಜೇಬಿನಲ್ಲಿದೆ—ನಿಕ್ಕಲ್ಲಿನವು ಹತ್ತಾಣೆ. ೨. ಹತ್ತಾಣೆಗೂ ಹೆಂಡ ತೆಗೆದು ತಾ—ದೋಸ್ತಿಯುವರು (ಸ್ನೇಹಿತರು) ಎಲ್ಲಾ ಹೀರಲಿ. ನೀನು ನನಗೇನೂ ಬುದ್ಧಿ ಹೇಳಬೇಡ—ನಾಳೆ ಗೀಳೆ ಇರಲಿ. ೩. ಆಕಾಶಕ್ಕಿಂತ ದೂರ ಹೆಚ್ಚಾಗಿದೆ ನಾಳೆಗೂ ನಮಗೂ, ಭೂಮಿಯಂತೂ ಮಡಗಿ (ಇಟ್ಟು)ಕೊಳ್ಳುವುದಿಲ್ಲ ರೂಪಾಯಿ ಗಂಟು ಮಾಡುವವನಿಗೂ. ४. ಬಿರಟೆ (Stopper) ಹೊರಟುಹೋದ ಪೀಪಾಯಿನಿಂದ ಹೆಂಡ ಬಸಿಯುವ ಮಾದರಿ—ಸುರಿದುಹೋಗುತ್ತದೆ ಮನುಷ್ಯನ ಬದುಕು. ನಾನು ಹೇಳುವುದು ಕಾತರಿ (ಖಂಡಿತ)! ೫. ಕುಡಿಕನ ಕೈಲಿ ಕಾಸು ಗೀಸು ಏನಾದರೂ ನಿಂತರೂ ನಿಲ್ಲಬಹುದಣ್ಣ; ಮನುಷ್ಯನ ಜೀವ ಮಾತ್ರ ಮುಳುಗುವ ಸಂಜೆ ಮೋಡದ ಬಣ್ಣ! ೬. ನಾಳೆ ಎಂದುಕೊಂಡು ನರಳುವುದೆಲ್ಲ ಬೆಪ್ಪುಗಳ ಮನಸ್ಸಿನ ಕನಸು. ನಾಳೆಯ ಪಾಡು, ನಾಳೆಯ ಭಾರ. ಈ ಹೊತ್ತಿಗೆ ಇರಲಿ ಮನಸ್ಸು. ೭. ಮನುಷ್ಯನ ಜೀವ ಮೂರೇ ನಿಮಿಷ. ಖುಷಿ (ಆನಂದ) ಪಟ್ಟವನು ಗೆದ್ದ. ತಾಪತ್ರಯವನ್ನು ತಬ್ಬಿ ಹಿಡಿದುಕೊಂಡು ಗೋಳಾಡುವವನು ಬಿದ್ದ. ೮. ತೆಗೆದುಕೊ ಮುನಿಯ, ನನ್ನ ಹತ್ತಾಣೆ. ಹೆಂಡದ ಬುರುಡೆ ಬರಲಿ, ನಾಳೆಯ ಯೋಚನೆ ನನಗೆ ಬೇಡ—ಈ ಹೊತ್ತು ಒಂದೇ ಇರಲಿ.

**೨೬. ನಡತೆ** ೧. ಬುರುಡೆಗೆ ಹೆಂಡ ಹೇಗೆ, ಹೆಂಡಕ್ಕೆ ನೊರೆ ಹೇಗೆ, ಹಾಗೆಯೇ ಮನುಷ್ಯನಿಗೆ ಒಳ್ಳೆಯ ನಡತೆ. ಬುರುಡೆಗೆ ಹಾಲು ಹೇಗೆ, ಹಾಲೊಳಗೆ ಹುಳ ಹೇಗೆ, ಹಾಗೆಯೇ ಹಾಳು ನಡತೆ ನರಮನುಷ್ಯನಿಗೆ. ಅಮಲಿನಿಂದ ಹೆಂಡಕುಡುಕ, ಗುಲ್ಲಿನಿಂದ (ಗಲಾಟೆಯಿಂದ) ಪಡಕಾನೆ (ಹೆಂಡದಂಗಡಿ), ನಡತೆಯಿಂದ ಗೊತ್ತಾಗುತ್ತದೆ ಒಳ್ಳೆಯ ಮನುಷ್ಯ. ಸದ್ದಿನಿಂದ ಕೆಟ್ಟ ಕಾಸನ್ನು, ಮುಖದಿಂದ ಮಾರಮ್ಮನನ್ನು, ನಡತೆಯಿಂದ ನೋಡಬಹುದು ಕೆಟ್ಟ ಮನುಷ್ಯನನ್ನು. ೨. ಮುನಿಯಣ್ಣ ಹೆಚ್ಚು

ಅಳತೆ ಬಿಟ್ಟರೆ ಅದೇ ಒಳ್ಳೆಯ ನಡತೆ. ನಮ್ಮ ಹೆಂಡ ಪಕ್ಕದವನಿಗೂ ಕೊಟ್ಟರೆ ಅದೇ ಒಳ್ಳೆಯ ನಡತೆ. ನಾನು ಕುಡಿದು ಬೇವಾರ್ಸಿಗೆ ಹಾಡುವುದೆ ಒಳ್ಳೆಯ ನಡತೆ. ಬೇವಾರ್ಸಿ ನನ್ನ ಹಾಡನ್ನು ಬರೆಯುವುದೆ ಒಳ್ಳೆಯ ನಡತೆ.

೨೭. **ಏನು ಹೇಳೋಣ ಈ ಹುಚ್ಚಿಗೆ** ೧. ನಮ್ಮ ಪಡಕಾನೆಯಲ್ಲಿ ಹುಂಬ ಮುನಿಯ ಇಬ್ಬರೂ ಘಟಾನುಘಟಿ[ಗಳು]. ಹೋದ ಶನಿವಾರ ಬಿತ್ತು ಇಬ್ಬರಿಗೂ ಭಾರಿ ಲಟಾಪಟಿ (ಜಗಳ). ೨. ಷುರು (ಪ್ರಾರಂಭ)ವಾಯಿತಣ್ಣ ಮಾರಾಮಾರಿ (ಹೊಡೆದಾಟ), ಯಾವುದೊ ಒಂದು ಚಿಕ್ಕ ಮಾತಿಗೆ! ಬೆಟ್ಟದಲ್ಲಿ ಕಲ್ಲುಗಳು ಪೇರಿಸಿದ (ಮೇಲೆ ಮೇಲೇರಿಸಿದ) ಹಾಗೆ ಲಾತು (ಏಟು) ಏರಿಕೊಂಡಿತು ಲಾತಿಗೆ. ೩. ನಡ ನುಗ್ಗಿ ಎತ್ತಿಹಾಕಿ, ಕೆಳಕ್ಕೆ ಕೆಡವಿಕೊಂಡು, ಮುನಿಯನಿಗೆ ಹುಂಬ ಬೆಚ್ಚಗೆ [ಏಟು] ಕೀಡುತ್ತಿದ್ದರೆ, ಅಣ್ಣ, ಮುನಿಯ ಕೂಗಿಕೊಂಡು ಹಾಕಿದ ಕೈಯನ್ನು ಮುಚ್ಚಿಗೆ! ೪. ಇಬ್ಬರಲ್ಲಿ ಒಬ್ಬನು ಠಾರಾಗ (ಸಾಯ)ಬೇಕು. ಅಲ್ಲಿಯವರೆಗೂ ಸೈನೆ (ಸರಿಯೆ)! ಪೋಲೀಸಿನವರು ಬಂದು ಹಿಡಿದುಬಿಟ್ಟರಣ್ಣ. ತೆಗೆದುಕೊ! ತಕ್ಕತೈನೆ! [ಆಟಕ್ಕೆ ಮೊದಲಾಯಿತು]. ೫. ಕೇಡಿ (ಪೋಲೀಸಿನವರ ಕಣ್ಣಿಗೆ ಸಿಕ್ಕಿರುವ ಕೆಡುಕ)ಗೆ ಕೇಡಿ ಮಿಲಾಯಿಸ (ಸೇರ)ಬೇಕು — ಆಗ ಅದು ನೋಡುವುದಕ್ಕೆ ಮಜ (ಸೊಗಸು)! ಮುನಿಯ ಹುಂಬ ಇಬ್ಬರು ಅಂತಹವರು. ಈಗ ಬಿದ್ದಿದ್ದಾರೆ ಸಜ. ೬. ದುಗ್ಗಾಣಿಯ (ಎರಡು ಬಿಡುಕಾಸಿನ) ಸೊಪ್ಪು ಹುಟ್ಟುವುದಿಲ್ಲ ಒಂದು ಸೇರು ಅಕ್ಕಿಯ ನುಚ್ಚಿಗೆ. ಹಲ್ಕ (ಕ್ಷುಲ್ಲಕ) ಜಗಳಕ್ಕೆ ಜೀವವೆಂದರೆ—ಏನು ಹೇಳೋಣ ಈ ಹುಚ್ಚಿಗೆ!

೨೮. **ನಮ್ಮ ಭೋಜ ಮುನಿಯ** ೧. ಹಿಂದೆ ಒಬ್ಬ ರಾಜನಿದ್ದ—ಭೋಜ ಎಂದು ಅವನ ಹೆಸರು. ಅವನ ಮುಂದೇನು—ಈಗಿನವರು—ಪಸ್ಸೀರ ಮುಂದಿನ ಕೆಸರು. ಅವನ ಹತ್ತಿರ ಯಾರಾದರೂ ಹಾಡಿದರೆ ಒಂದು ಪಕ್ಷ (ವೇಳೆ), ಕೊಡುತ್ತಿದ್ದನಂತೆ ತೆಗೆದುಕೊ ಎಂದು ಅಕ್ಷರಕ್ಕೆ ಒಂದು ಲಕ್ಷ. ೨. ನಾನು ಕೂಡ ಹಾಡುತ್ತೇನೆ ಏರಿದಾಗ ಮತ್ತು (ಅಮಲು). ನನ್ನ ಹಾಡಿನ ಜೋಕು (ಸೊಗಸು) ಎಂದರೆ ಬೇವಾರ್ಸಿಗೆ ಗೊತ್ತು. ನನ್ನ ಹಾಡುಗಳ ಪಸಂದಿ (ಸೊಗಸಿ)ಗೆ ಗೆಣೆಯ (ಸೊಗಸುಗಾರ) ಬೇವಾರ್ಸಿಯು ಹೆಂಡ ಕುಡಿದವನ ಹಿಂದೆ ಅಲೆಯುವುದೆ ಸಾಕ್ಷಿ. ೩. ನಮಗೇನೂ ಬೇಕಿಲ್ಲ ಅಣ್ಣ, ಅಕ್ಷರಕ್ಕೆ ಒಂದು ಲಕ್ಷ. ಒಂದು ಕಾಸು ಬಿಡಬೇಕಲ್ಲ ಮುನಿಯಣ್ಣನ ಬೊಕ್ಕಸ? ಅದಕ್ಕೂ ಬೇಡವೆಂಪರೆ, ಅಳತೆ ಬಿಡುವಾಗ ತೊಟ್ಟು ಹೆಚ್ಚಿಗೆ ಬಿಟ್ಟಿತು ಎಂದರೆ ಮುರುಕೆ ಮನೆಯಲ್ಲಿ! ೪. ಮುನಿಯಣ್ಣನಿಗೆ ಏನು ಗೊತ್ತು ನನ್ನ ಪದಗಳ ಷೋಕು (ಸ್ವಾರಸ್ಯ)? ಹೆಂಡದ ಪದಗಳನ್ನು ತಿಳಿಯುವುದಕ್ಕೂ [ಸಂಸ್ಕಾರ, ಬುದ್ಧಿ, ಇತ್ಯಾದಿ] ಬೇಕು! ಈಚಲು ಹೆಂಡದ ಸಿಹಿ (ಹುಳಿ)

ಕಂಡರೆ ಪೀಪಾಯಿ ಒಂದು ಪಕ್ಷ, ಬಿರುಕು ಬಿಟ್ಟರೂ ಬಿಟ್ಟ್ಹಾತು ಮುನಿಯಣ್ಣನ ಬೊಕ್ಕಸ.

**೨೯. ಬುದ್ಧಿವಾದ** ೧. ಕಾಸಿಗೆ ಕಾಸು ಗಂಟುಹಾಕಿ, ಹೊಟ್ಟೆಗೆ ಬೆನ್ನು ಅಂಟುಹಾಕಿ, ನಾನೂ ಒಬ್ಬ ಸೆಟ್ಟಿ (ಹಣವಂತ), ದುಡ್ಡು ಇದೆ ಗಟ್ಟಿ (ತುಂಬಾ), ಎಂದು ಹೇಳುತ್ತಿ, ಮುನಿಯ. [ಇದು] ಚೆಂದವೆ, ಮುನಿಯ? ೨. ಹೆಚ್ಚು ಅಳತೆ ಕೊಡುವೊಲ್ಲೆ, ಬಿಡುಕಾಸೂ ಬಿಡುವೊಲ್ಲೆ. ನೀನೂ ತಿನ್ನವೊಲ್ಲೆ. ಕೋ (ತೆಗೆದುಕೊ) ಎನ್ನವೊಲ್ಲೆ. [ಇದು] ಚೆಂದವೆ, ಮುನಿಯ? ನೀನೇ ಹೇಳು, ಮುನಿಯ? ೩. ಹೀಗೆಲ್ಲ ಗಂಟುಮಾಡಿ, ಥೈಲಿ ಥೈಲಿ (ಚೀಲ ತುಂಬ) ದುಡ್ಡುಮಾಡಿ, ನೀನು ಸತ್ತರೆ ನಿನಗೆ ಸುಡುಗಾಡೇ ಕೊನೆಗೆ! ಶಾಶ್ವತವೆ ನೀನು? ಬುಟ್ಟಿಗೆ ಬಿದ್ದ ಮೀನು! ೪. ಸುಮ್ಮ ಸುಮ್ಮನೆ ಒದ್ದಾಡುತ್ತಿ. ಮೂರು ಹೊತ್ತೂ ದುಡ್ಡು ಮಾಡುತ್ತಿ. ಅನುಭವಿಸದೆ ಸಾಯುತ್ತಿ. ನಿನಗೇನು ಕಿಫಾಯ್ತಿ (ಲಾಭ)? ಬಿಡುಕಾಸಿಗೆ ನಡುಗು! ಮಕ್ಕಳಿಗೆ ಮಡಗು (ಇಡು)! ೫. ನಿನ್ನ ಮಕ್ಕಳು ಜೂಜಾಡಿ, ದುಡ್ಡನ್ನೆಲ್ಲ ಪೋಲು(ವ್ಯರ್ಥವಾಗಿ ಹಾಳು)ಮಾಡಿ, ಪಡಕಾನೆಗೆ ತೆತ್ತರೆ, ಸೂಳೆಮನೆಗೆ ಹೊತ್ತರೆ, ನಿನಗೇನು ಬಂತು ಮುನಿಯ? ಸತ್ತಮೇಲೆ ಶೂನ್ಯ! ೬. ಆದ್ದರಿಂದ ಕೇಳಿದ ಹಾಗೆ ಹೆಂಡ ಬಿಟ್ಟು, ಹೇಳಿದ ಹಾಗೆ ಕೇಳಿದರೆ ನೋಡು—ಇಲ್ಲವೆಂದು ಎನ್ನಬೇಡ, ನೀನಾಗುತ್ತಿ ಮುನಿಯ—ಜಗದೊಳಗೆ ಮಾನ್ಯ!

**೩೦. ಮನಸ್ಸಿಗೆ ಒಪ್ಪುವ ಮಾತು** ೧. ಹೆಚ್ಚಿಗೆ ಹೆಂಡ ಕೇಳುತ್ತಾ ಇದ್ದರೆ ಮಚ್ಚನ್ನೇ (ಕೈಕೊಡಲಿ) ಎತ್ತಿ [ತಲೆ] ಕೊಚ್ಚುತ್ತೇನೆಂದು ಹೇಳುವೆಯಲ್ಲ, ಮುನಿಯಣ್ಣ—ಕೊಲ್ಲುವ ಕೆಲಸ, ಬದುಕಿಸುವ ಕೆಲಸ, ಎಲ್ಲಾ ನಿನಗೆ ಕೊಟ್ಟವರು ಯಾರು? ಸಲ್ಲದ ಮಾತು ಕಾಣಣ್ಣ! ೨. ಮಾತಿಗೆ ಮಾತು, ಏಟಿಗೆ ಏಟು, ಯಾತಕ್ಕೆ ಹೇಳುತ್ತಿ ಕೊಲ್ಲುತ್ತೇನೆಂದು? ಗೃಹಸ್ಥ (ಸಭ್ಯ) ಅಲ್ಲ ನಿನ್ನ ವಿದ್ಯೆ! ಕಚ್ಚುಗಿಚ್ಚು ಕಾಸನ್ನು ಈಸ್ಕೊ (ತೆಗೆದುಕೊಳ್ಳ)ವೊಲ್ಲೆ. ಹೆಚ್ಚಿಗೆ ಕೇಳಿದರೆ ಕೋಪ [ಮಾಡುವುದು] ಬಲ್ಲೆ. ಮಸ್ತಾಗಿ (ಬಹಳವಾಗಿ) ಇದೆ ನಿನ್ನ ವಿದ್ಯೆ! ೩. ಕೊಲ್ಲುವ ಕೆಲಸ ನಿನ್ನದು ಅಲ್ಲ, ಅಣ್ಣ. ಕೊಲ್ಲುವುದಕ್ಕೆ ಒಬ್ಬನನ್ನು ಮಡಗಿ (ಇಟ್ಟ)ದ್ದಾನೆ ದೇವರು. ಈಶ್ವರನೆಂದು ಅವನ ಹೆಸರು. ಬ್ರಾಹ್ಮಣನು ಒಬ್ಬ ಅಭ್ಯಾಸವಿಲ್ಲದೆ ಹೋಮಮಾಡಿ ಸುಟ್ಟುಕೊಂಡನಂತೆ ಮೀಸೆಯ ಜೊತೆಗೆ ಗಡ್ಡವನ್ನು! ೪. ಇನ್ನೂ ಹೇಳುತ್ತೇನೆ ಕೇಳು ಮುನಿಯಣ್ಣ—ಮೀನುಗಳು ಬಂದರೆ ತಿನ್ನುವುದಕ್ಕೆ ತನ್ನನ್ನು, ಹೇಳುತ್ತದಂತೆ ಗಾಳ (ಮೀನು ಹಿಡಿಯುವ ಕೊಕ್ಕೆ)ದ ಹುಳು: 'ನನ್ನನ್ನು ಹಿಡಿದು ನುಂಗುವುದಕ್ಕೆ ಸುತ್ತಿ ಸುತ್ತಿ ನೀನು ಇಲ್ಲಿ ಬಂದರೆ, ಕುಳಿತಿದ್ದಾನೆ ಅಲ್ಲಿ ಮೇಲೆ ನಿನ್ನನ್ನು ನುಂಗುವುದಕ್ಕೆ

ಬೆಸ್ತರವನು!' ೫. ಹೆಂಡ ಮಾರುವುದು ನಿನ್ನ ಕೆಲಸ. [ತಲೆಯ] ಬುರುಡೆ ಒಡೆಯುವುದು ನಿನಗೇಕಣ್ಣ? ಕೋಪಿಸಬೇಡ ಮುನಿಯಣ್ಣ. ಮನಸ್ಸಿಗೆ ಒಪ್ಪುವ ಮಾತು ಹೇಳುತ್ತೇನೆ. ನಾನು, ರತ್ನ, ಏನು ಹೇಳಿದೆನೆಂದು ನೆನಪಿನಲ್ಲಿ ಇಟ್ಟುಕೊ ಮುನಿಯಣ್ಣ!

**೩೧. ತೃಪ್ತಿ** ೧. ದುಡ್ಡು ಉಳ್ಳವರು, ದುಡ್ಡು ಇಲ್ಲದವರು, [ಎಂದು] ಲೋಕಕ್ಕೆ ಎರಡೇ ಜಾತಿ ಎಂದು ಎಂದಿದ್ದಾನೆ ನಮ್ಮವನು ಒಬ್ಬ. ಏ ಹೈ ಸಚ್ಚಿ ಬಾತ್ಞಿ (ಇವೇ ಸತ್ಯವಾದ ಮಾತುಗಳು)! ೨. ಫೈಲಾದವರು (ಮೊದಲಿನವರು) ದುಡ್ಡಿಗೆ ದತ್ತು. ಅವರು ಕಂಡಿಲ್ಲ ತೃಪ್ತಿ—ಕಾಸು ಇಲ್ಲದಿದ್ದರೂ ದುಸರಿ (ಎರಡನೆ) ಯವರಿಗೆ ಇದ್ದುದರಲ್ಲೆ ತೃಪ್ತಿ. ೩. ದುಸರಿಯುವರದು ತೃಪ್ತಿ ಸತ್ತರೆ ಲೋಕಕ್ಕೆ ಬಂತು ಚಟ್ಟ (ಶವಯಾನ). 'ಆಗಯಾ ರೆ (ಬಂದುಹೋಯಿತು ಕಾಣೊ) ಚಟ್ಟ' ಎಂದೆಂದರೆ, ಎಲ್ಲಾ ಘನ (ನಾಶ)! ಮಟ್ಟ (ಧ್ವಂಸ)! ೪. ಬಡವರ ತೃಪ್ತಿಗೆ ದಫನ್ (ಹೂಳುವುದು) ಎಂದರೆ, ಎಲ್ಲರ ಬಾಯಿಗೂ ಮಣ್ಣು! ದೊಡ್ಡದು ಚಿಕ್ಕದು ಸಬ್ಬಿ (ಎಲ್ಲಾ) ಒಟ್ಟಿಗೆ ಎಕ್ಕಹುಟ್ಟಿಹೋಗುತ್ತದೆ (ನಾಶವಾಗುತ್ತದೆ), ಅಣ್ಣ! ೫. ಲೋಕವನ್ನು ಬದುಕಿಸುವ ವಿಷ್ಣು ಎಂದು ಎಂದರೆ, ದುಸರಿಯುವರದು ತೃಪ್ತಿ! ಫೈಲಾದವರಿಗೆ ಉಸಿರಾಡಿಸುವುದೂ ದುಸರಿಯುವರದು ತೃಪ್ತಿ! ೬. ದುಸರಿಯ ಜೊತೆಗೆ ಫೈಲಾದವರ ತೃಪ್ತಿ ಮಿಲಾಯಿಸಿ (ಬೆರೆಸಿ) ಹೋದರೆ, ಭೂಮಿಯಲ್ಲಿ ಇರುವವರಿಗೆ ಏಕೆ ಬೇಕಣ್ಣ—ಸ್ವರ್ಗ ಗಿರ್ಗದ ತೊಂದರೆ! ೭. ಹೆಂಡಕ್ಕೆ ಮುನಿಯ ನೀರು ಗೀರು ಬೆರೆಸಿ ಮೋಸಮಾಡಿದ್ದಾನೆ ನಂಬಿಸಿ; ಅದಕ್ಕೇ ಈ ಹೊತ್ತು ಕನ್ನಡ ಪದಕ್ಕೆ ಬೆರಕೆಯಾಗಿದೆ. ಕ್ಷಮಿಸಿ.

**೩೨. ನಮ್ಮ ಮುನಿಯನ ಜಬರ್** ೧. ಹಿಂದೆ ಲೋಟವಲ್ಲಿ ನೀರು ಇಟ್ಟುಕೊಂಡು, 'ಛೂ ಮಂತ್ರ' ಎಂದ ಯೇಸು! ಇಟ್ಟ ನೀರೆಲ್ಲ ಹೆಂಡವಾಗಿಹೋಯಿತು. ಅದು ಕೆಲಸ, ಭೇಷು! ೨. ಮಾತಿಗೆ ಹೇಳುತ್ತೇನೆ—ಹಿಂದಿನ ಕಾಲದಲ್ಲಿ ಎಂಥೆಂಥವರು ಇದ್ದರೆಂದು! ಈಗಲೂ ಇದ್ದಾರೆ, ದೊಡ್ಡ ಪಡಕಾನೆ (ಹೆಂಡದಂಗಡಿ) ಇಟ್ಟಾಕ್ಷಣವೇ [ಪ್ರಯೋಜನ] ಬಂತೆ! ೩. ಕಾಲಿ (ಬರಿಯ) ನೀರನ್ನು ಹೆಂಡ ಮಾಡಿದರೆ ಯೇಸು ಕ್ರಿಸ್ತ ಪ್ರಭು—ಪಕ್ಕ (ಅತ್ಯುತ್ಕೃಷ್ಟ) ಹೆಂಡವನ್ನು ನೀರು ಮಾಡುವುದು ನಮ್ಮ ಮುನಿಯನ ಜಬರ್! ೪. ಹೇಳಿಸಿಕೊಳ್ಳದೆ ತಿಳಿದುಕೊಳ್ಳುವವರಿಗೆ ಹೇಳಿದರೆ ಏನಾದರೂ [ಪ್ರಯೋಜನ] ಉಂಟು; ಉಗಿದು ಎಂದರೂ ತಿಳಿದುಕೊಳ್ಳದವರು—ಪಾರಕ್ಕಿಂತ ಹೆಚ್ಚಿಗೆ ಗಂಟು [ಎಂದರೆ ಅದು ಪ್ರಯೋಜನಕ್ಕೆ ಬಾರದುದು].

**೩೩. ಮುನಿಯನ ಮುಖಕ್ಕೆ ಮೂರು ನೀರು** ೧. ಕೊಕ್ಕರೆ ಮೀನಿಗೆ ಹೊಂಚುಹಾಕಿದ ಹಾಗೆ, ಕಪ್ಪೆಗೆ ಹಾವು ಕಾಯ್ದುಕೊಂಡ ಹಾಗೆ, ನಿಂತುಕೊಂಡಿದ್ದಾನೆ

ಮುನಿಯ — ಹೆಂಡ ಮಾರುವ ಗೆಣೆಯ (ಸೊಗಸುಗಾರ) — ಕುಡಿಯುವವರನ್ನು ಹಿಡಿದು ಸುಲಿದು ಹಾಕುವುದಕ್ಕೆ ಮಡಗಿ (ಇಟ್ಟಿ)ದ್ದಾನೆ ಹೆಂಡದ ಮನೆಯನ್ನು ! ೨. ಕುಡಿಯುವವರಿಗೆ ಹೇಗಿದ್ದರೇನು ? ಬುರುಡೆ ತುಂಬಿದರಾಯ್ತು, ಎಂದು ಮುನಿಯ, ಹೆಂಡಕ್ಕೆ ನೀರು ಗೀರು ಬೆರಸಿ ಮಾರಿ, ತೊಟ್ಟು ತೊಟ್ಟಿಗೂ ಹೋರಿ (ಜಗಳವಾಡಿ) ಬಡವನ ಜೀತ (ಸಂಬಳ)ದ ಪುಡಿಕಾಸನ್ನೆಲ್ಲ ಕೆರೆದುಕೊಳ್ಳುತ್ತಾನೆ ಗೋರಿ (ಬಾಚಿ ಕೊಂಡು). ೩. ಮೈಯ್ಯಿನ ರಕ್ತ ನೀರು ಮಾಡಿಕೊಂಡು, ಬೆವರಿನ ಮಳೆಯಲ್ಲಿ ಕಾಸು ಕೆರೆದುಕೊಂಡು, ನೆಟ್ಟಗೆ ಬಂದರೆ ಇಲ್ಲಿಗೆ [ಹೆಂಡದಂಗಡಿಗೆ], ಮೋಸಮಾಡುತ್ತ ಮೆಲ್ಲಗೆ, ಬತ್ತಿಕೊಂಡ ಹೊಟ್ಟೆಯನ್ನು (ಬಡವನನ್ನು) ಬಗೆದು ಹಿರಿದುಕೊಳ್ಳುವ ಡೊಳ್ಳ (ಭಾಗ್ಯವಂತನಾದ ಮುನಿಯ)ನ್ನು ಹಾಕಬೇಕು ಗಲ್ಲಿಗೆ. ೪. ಕೊಟ್ಟಿದ್ದನ್ನೆ ಹಿಂದಕ್ಕೆ ಕೊಟ್ಟವನು, ಕೊಟ್ಟುದಕ್ಕಿಂತ ಹೆಚ್ಚು ಕೊಟ್ಟವನು, ಮನುಷ್ಯನೇ ಅವನು ಎಂದರೆ, ದೇವರೇ ಅವನು ಎಂದೆಂದರೆ, ಕೊಟ್ಟುದನ್ನೂ ಕೊಡದಿದ್ದವನಿಗೆ ಹೆಸರಿಡುವುದೇ ತೊಂದರೆ. ೫. ಕಾಸು ಇಸು (ತೆಗೆದು)ಕೊಂಡು ಕಸ ಕೊಟ್ಟು, ಧರ್ಮ ಗಿರ್ಮ ಮೂಲೆಯಲ್ಲಿಟ್ಟು, ದುಡ್ಡು ಕೂಡಿಹಾಕುವವನು ಯಾರು ? ಬೈಗಳು ತಿನ್ನುವವನು ಯಾರು ? ಎಲ್ಲರೂ ಹೇಳುವುದೆಂದರೆ ಮುನಿಯನ ಮುಖಕ್ಕೆ ಮೂರು ನೀರು [ಒಂದು ತೆರದ ಬೈಗಳು] ! ೬. ಹಿಂದೆ ವಿಭೀಷಣ ಕೈ ಕೈ ಮುಗಿದು ರಾವಣನಿಗೆ ಹೇಳಿದ, ಕಡೆಗೆ ಉಗಿದು : 'ಅನ್ಯಾಯ ಬೇಡವೆಂದು. ನ್ಯಾಯವನ್ನೇ ಮಾಡೆಂದು.' ತಿಳಿದವನ ಮಾತನ್ನು ಮೂಲೆಗೆ ಹಾಕಿ(ನಿರಾಕರಿಸಿ)ದವನ ಗತಿ ಏನಾಯಿತು ಎಂದು [ಗೊತ್ತೆ] ? ೭. ಬಡವನನ್ನು ತಿನ್ನುವ ಶ್ರೀಮಂತಮ್ಮ [ಅಮ್ಮ ಎಂಬುದು ಒಂದು ತೆರದ ಮಾರಿ] ಮುನಿಯನಿಗೆ ಅಕ್ಕ ! ಇವನೇ ತಮ್ಮ ! ಮುನಿಯನಿಗೆ ಅಕ್ಕನ ಚಾಳಿ (ನಡತೆ) ಮನೆ ಮುರಿಯುವ ಗಾಳಿ (ಪಿಶಾಚಿ) ! ಹೇಳಿದ್ದು ಕೇಳದಿದ್ದರೆ ಯಾರಿಗೇ ನಂತೆ ? ಎಕ್ಕ ಹುಟ್ಟಿ (ನಾಶವಾಗಿ) ಹೋಗಲೇಳಿ !

೩೪. **ಹೆಂಡಕ್ಕೆ ತರ್ಪಣ** ೧. ಜೀತ (ದುಡಿಯುವ ಕೆಲಸ) ಮಾಡಿ ಕಾಸು ಕೆರೆದುಕೊಂಡು, ಹಟ್ಟಿ (ಮನೆ)ಯಲ್ಲಿ ಹೆಂಡತಿಯನ್ನು ಮೋಸಹೋಗಿಸಿಕೊಂಡು, ಏನೋ ಕುಡಿಯುವುದಕ್ಕೆ ಬಂದರೆ—ಸೇರಿಗೆ ಸೇರು ನೀರನ್ನೆ ಬೆರೆಸಿ, ಕಾಸು ಕೇಳು ತ್ತೀಯ, ಮೋಸ ಮರೆಸಿ, ಸಾಚಾ (ಸತ್ಯವಂತ) ಮನುಷ್ಯರು ಬಂದರೆ ? ೨. ನನ್ನ ಕೈ ಕಾಸು ! ನನಗವಳು ಹೆಂಡತಿ ! ಮೋಸ ಮಾಡುತ್ತೇನೆ ನಾನು ಅವಳಿಗೆ ಹಿಡಿದು ! ಆ ಮಾತು ಆ ಕಡೆಗೆ ಬಿಡಲಿ ! ಕಾಸೂ ಕೊಟ್ಟುಕೊಂಡು ತೆಪ್ಪಗೆ ತಣ್ಣಗೆ ನಿನ್ನ ಕೈಲಿ ಮೋಸ ಹೋಗುವುದು ನನಗೆ—ಮಾನದ ಬುಡಕ್ಕೆ ಕೊಡಲಿ ! ೩. ಹೆಂಡ ಮಾರುವ ವರು ಎಲ್ಲರೂ ಹೀಗೆಯೇ ಮೋಸಮಾಡುತ್ತಾರೆಂದು ನನಗೆ ನೀನು ಹೇಳಬೇಕೆ,

ನನಗೂ! ದುಡ್ಡಿನ ರುಚಿ ಕಂಡವರು ನಿಮಗೆ ಎಷ್ಟು ಹೇಳಿದರೇನು ನಾವೂ ಸುಮ್ಮನೆ? ಒಬ್ಬನ ಚಾಳಿ (ನಡತೆ)ಯೇ ಮನೆಗೂ! ೪. ಕುಡಿಯುವ ನನ್ನ ಬಾಯಿಗೆ ಇನ್ನು ಮೇಲೆ ಬೀಗ ಹಾಕುತ್ತೇನೆ ಎಂದು ಹೇಳುತ್ತೇನೀಗ—ಎದೆಗೆ ಕೈಯನ್ನು ತಾಕಿಸಿ (ತಗುಲಿಸಿ)! ಈ ಮಾತು ಹೋದರೆ, ಮಾನಕ್ಕೆ ತೊಂದರೆ! ರತ್ನನ ಮಾತಿನ ತೂಕಕ್ಕೆ (ಗೌರವಕ್ಕೆ) ಎಂದರೆ ರತ್ನನ ಹೆಸರೆ ಸಾಕ್ಷಿ! ೫. ಹೇಳುತ್ತೇನೆ ಕೈಯನ್ನು ಎದೆಯ ಮೇಲಿಟ್ಟು — ಈ ಹೊತ್ತಿನಿಂದ ಹೆಂಡ ಬಿಟ್ಟೆ—ಮಾನಕ್ಕೆ ಬದುಕಬೇಕೆಂದು. ಮನುಷ್ಯ ಮಾನ ಹೇಗಿದೆಯೆಂದು ಗೊತ್ತಿಲ್ಲದೆ, ನಾನೂ ಇದ್ದೇನೆಂದು ಹೇಗೋ ಇದ್ದರೆ ಬಂತೆ! ೬. ಪ್ರಾಣಕ್ಕಿಂತ ಹೆಂಡ ಹೆಚ್ಚು. ಹೆಂಡಕ್ಕಿಂತ ಮಾನ ಹೆಚ್ಚು. ಹೆಂಡದ ಮುನಿಯ! ಚಿಪುಣ! ಮಾನದ ಮುಂದೆ ಯಾವುದೇನಿದೆ? ತೆಗೆದುಕೊ, ಈಗ ಬರುತ್ತದೆ ಹಾಳು ಹೆಂಡಕ್ಕೆ ತರ್ಪಣ!

**೩೫. ಮುನಿಯನ ಮುಖಕ್ಕೆ ಮುಷ್ಟಿ** [ಒಂದು ಆಹ್ವಾನ] ೧. ಬೆಂಕಿಯನ್ನು ಇಟ್ಟಿದ್ದಳಂತೆ, ಹಿಂದೆ ಅಡಗೂಲಜ್ಜಿ. ಮುನಿಯನಿಗೂ ಹತ್ತಿಕೊಂಡಿತೆ ಅವಳಿಗೆ ಇದ್ದ ಕಜ್ಜಿ [ಕೆಟ್ಟ ಗುಣ]? ಕೋಳಿ ಕೂಗದಿದ್ದರೆ ಎಲ್ಲಿಯೂ ಬೆಳಕೇ ಆಗುವುದಿಲ್ಲವೆ? ಹೆಂಡ ಇಲ್ಲದೆಹೋಯಿತೆಂದರೆ ಹಾಡುವುದಕ್ಕಾಗುವುದಿಲ್ಲವೆ! ೨. ಝುಂ ಎಂದು ಇರಬೇಕಾದರೆ ಪದಗಳ ಗತ್ತು (ಠೀವಿ), ಏನಾದರೂ ಬೇಕೇ ಬೇಕು ಅದಕ್ಕೊಂದು ಮತ್ತು (ಅಮಲು)! ಇದುವರೆಗೂ ನನಗಿತ್ತು ಈಚಲು ಹೆಂಡದ ಮತ್ತು. ಇನ್ನು ಮೇಲೆ ಏನಿದೆಯೆಂದು ನಿನಗೇನೋ ಗೊತ್ತು? ೩. ಹೆಂಡವಿಲ್ಲದೆ ಉಡುಗಿ (ತಣ್ಣಗಾಗಿ) ಹೋದ ರತ್ನ ಎಂದು ಹೇಳಿ, ಪುಕ್ಕ ಕೆದರಬೇಡವೊ—ಏ ಜಂಭದ ಕೋಳಿ! ಪುಟ್ಟನಂಜಿ ನನಗಿದ್ದಾಳೆ ಪಾಯಸ ಪರಮಾನ್ನ! ಹೆಂಡ ಏಕೆ ಅದರ ಮುಂದೆ—ಹಳಸಿದ ತಂಗಳು ಅನ್ನ! ೪. ಉತ್ತಮ ಜನ್ಮಕ್ಕೆ ಬರುವುದು ಮನುಷ್ಯನ ಪ್ರಯತ್ನ. ಸತ್ತು ಹೋಗಿ ದಫನ್ನಾದ (ಹೂತುಹೋದ) ಹೆಂಡದ ಅಯ್ಯ ರತ್ನ! ಮರಳಿ (ಪುನಃ) ಚಿಗಿದುಕೊಂಡಿದ್ದಾನೆ ಪುಟ್ಟನಂಜಿಯ ರತ್ನ! ನೋಡು, ಹೆಂಡವಿಲ್ಲದೆಯೇ ಅವನು ಹಾಡುವ ಗತ್ತ(ಠೀವಿ)ನ್ನು!

**೩೬. ಕಡೆಯ ಹಾಡು** ೧. ಬೇವಾರ್ಸಿ! ನಿನ್ನ ಹೆಸರು ನೆನಪಿಗೇ ಬರದು. ಹೆಂಡಕುಡಿಕರು ಏನು ಎಂದರೂ ಕೋಪ ಮಾಡಬಾರದು. ಇಷ್ಟಕ್ಕೂ ಕೂಗಿದ್ದಕ್ಕೆ 'ಓ' ಎಂದು ನೀನು ಎಂದರೆ, ಹೇಗಾದರೂ ಕೂಗಿದರೆ ಏನಾಯಿತು ನಿನಗೆ ತೊಂದರೆ? ೨. ನೀನೂ ಬಹಳ ದಿವಸ ತಪ್ಪಿ (ತೊಂದರೆ) ತೆಗೆದುಕೊಂಡು, ನನ್ನ ಜೊತೆಗೆ ಬಹಳ ಅಲೆದೆ—ನನ್ನ ಹಾಡು ಬರೆದುಕೊಂಡು. ಅಷ್ಟಲ್ಲದೆ ಹೇಳುತ್ತಾರೆಯೆ ದೊಡ್ಡ ದೊಡ್ಡವರೆಲ್ಲ—'ಕಷ್ಟಪಡದೆ ಕೀಳುತ್ತೀಯಾ ದೊಡ್ಡ ಆನೆಯ ಹಲ್ಲನ್ನು?' ೩. ಲೋಕವೇ

ಹುಚ್ಚು ಹುಚ್ಚು. ಹಿಂದೆ ಇದ್ದಹಾಗೆ ಇಲ್ಲ. ವಸ್ತಾದ(ಚೆಟ್ಟಿ)ನಿಗೆ ಹೇಳುತ್ತಾರೆ ಈಗಿನವರು 'ಮಲ್ಲ'! ಯಾರಾದರೂ ಕೇಳಿದವರು ಪದಗಳು ಚೆಂದವೆಂದರೆ, ಮಸ್ತಾಗಿ (ತುಂಬಾ) ನಾನು ಹಾಡುತ್ತೇನೆ—ನೀನು ತಿರುಗಿ(ಪುನಃ)ಬಂದರೆ!

## ಪುಟ್ಟನಂಜಿಯು ರತ್ನ

**೩೭. ನನ್ನ ಪುಟ್ಟನಂಜಿಯು ರೂಪ** ೧. ಬೇವಾರ್ಸಿ! ನನ್ನ ಪುಟ್ಟನಂಜಿಯು ರೂಪವನ್ನು ಹಾಡುತ್ತೇನೆ, ಬಾ ಅಪ್ಪ! ನನಗೆ ಆಗಾಗ್ಗೆ ಹಾಡಿಸುತ್ತದೆ ನನ್ನ ಪುಟ್ಟ ನಂಜಿಯು ರೂಪ! ೨. ಹಾಲಿನಲ್ಲಿ ಕಮಲದ ಹೂ ತೇಲಿಬಿಟ್ಟು, ಮೇಲೆ ಒಂದು ತೆಳ್ಳನೆಯ ಲೇಪ ಚಿನ್ನದ ನೀರಿನಲ್ಲಿ ಕೊಟ್ಟ ಹಾಗಿದೆ! ೩. ಅಮಾವಾಸ್ಯೆಯಲ್ಲಿ ಹತ್ತಿಸಿದ ಹಾಗೆ ಒಂದು ಹತ್ತು ನೂರು ಮತಾಪನ್ನು (ಹಗಲುಬತ್ತಿ), ಬೆಳಕಾಗುತ್ತದೆ ಕಂಡರೆ ನನಗೆ! ೪. ಔಷಧಿಗೆ ಇಂಕ್ರ (ಸ್ವಲ್ಪ) ಬೇಕೆಂದರೂ ಅವಳ ತಾವು (ಹತ್ತಿರ) ಇಲ್ಲ ಕೋಪ, ಅದಕ್ಕೇ ಅಷ್ಟೊಂದು ಚೆನ್ನಾಗಿದೆ! ೫. ನನಗೇನಾದರೂ ಕೋಪಬಂದರೆ, ನಮ್ಮ ನಮ್ಮ ಪ್ರೀತಿಯು ನೆನಪನ್ನು ಕರೆದುಕೊಂಡು ಬಂದು, ಕೋಪವನ್ನು ಇಕ್ಕು (ಬಡಿದುಹಾಕು)ತ್ತದೆ! ೬. ಬಟ್ಟೆಯು ಕಪ್ಪನ್ನು ತೊಳೆಯುವುದಕ್ಕೆ ನಾವು ಹೇಗೆ ಹಾಕುತ್ತೇವೆ ಸೋಪನ್ನು, ಮನಸ್ಸಿನ ಕೆಟ್ಟ ಭಾವನೆಗಳಿಗೆ ಹಾಗೆ! ೭. ದೇವರ ತಾವಿಗೆ (ಬಳಿಗೆ) ನಾನು ಒಯ್ಯುವುದಿಲ್ಲ ಹಣ್ಣು, ಕಾಯಿ, ಧೂಪ. ದೇವರಿಗೆ ಹಣ್ಣು, ಕಾಯಿ, ಧೂಪ ಎಲ್ಲಾ......! ೮. ಸಿಡಿಯುವ ಮದ್ದನ್ನು ಸುಟ್ಟುಹಾಕಿದ ಹಾಗೆ ಮಡಗಿ (ಇಟ್ಟು)ದ್ದೇನೆ ಕೇಪನ್ನು (ಮದ್ದು ಸುಡಲು ಇಡುವ ರಂಜಕ ಬಳಿದ ಲೋಹದ ಬಿಲ್ಲೆ), ನನ್ನ ತಾಪತ್ರಯವನ್ನು ಉಡಾಯಿಸು (ಎತ್ತಿಹಾಕಿ ನಾಶಮಾಡು)ತ್ತದೆ! ೯. ಚಿನ್ನದ ಭರಣಿಯಲ್ಲಿ ತುಂಬಿಟ್ಟ ಹಾಗೆ ಹಾಲು, ಸಕ್ಕರೆ, ತುಪ್ಪ—ಒಳ್ಳೆಯ ಗುಣಗಳನ್ನು ಒಳಗೆ ಇಟ್ಟಿದೆ! ೧೦. 'ಪುಟ್ಟನಂಜಿಯು ಕೈಹಿಡಿದವನು ನೀನೆ ಭಲೆ! ಭೂಪ!' ಎಂದು ನನಗೆ ಬೆನ್ನುತಟ್ಟುತ್ತದೆ! ೧೧. ದೇವಸ್ಥಾನದಲ್ಲಿ ಹೇಗಿರುತ್ತದೆ ಚಿನ್ನದ ನಂದಾದೀಪ, ಹಾಗೆ ನನ್ನ ಹಟ್ಟಿ(ಮನೆ)ಯನ್ನು ಬೆಳಗಿಸುತ್ತದೆ! ೧೨. ಇದನ್ನು ಕೇಳಿದವರು ಯಾರಾದರೂ 'ಅಯ್ಯೋ ಇವನೊಬ್ಬ ಹುಚ್ಚ! ಪಾಪ!' ಎಂದವರಿಗೆ 'ಅಯ್ಯೋ ಪಾಪ!' ಎನ್ನುತ್ತದೆ.

**೩೮. ಆಗ–ಈಗ** ೧. ಹಿಂದೆ ನಾನು ಕುಡಿದು ಮೋರಿಗೆ(ಬಚ್ಚಲಿಗೆ) ಬಿದ್ದು, ಬೆಳಗ್ಗೆ ಒಂಬತ್ತು ಗಂಟೆಗೆ ಎದ್ದು, ಹೇಗೆ ಹೇಗೋ ಹಟ್ಟಿ(ಮನೆ)ಗೆ ಬಂದರೆ ಏನು ಕಾಣಿಸಿತು ಎಂದು ಹೇಳುತ್ತಿ? ಹರಿದಿದ್ದ ಬಲೆಯನ್ನು ಹೊಲಿಯುವ ಜೇಡನನ್ನು ನೋಡುತ್ತಿದ್ದಳು ಹೆಂಡತಿ, ಕುಳಿತು! ೨. ಜೀತ(ದುಡಿತ)ಮುಗಿಸಿಕೊಂಡು ಈಗ

ನಾನು ನೆಟ್ಟಗೆ ಹಟ್ಟಿ (ಮನೆ)ಗೆ ಬಂತೆಂದರೆ, ಒಂದೇ ಏಟಿಗೆ ಚಿಗರಿ ಚಿಗಿದ ಹಾಗೆ ನನ್ನ ಪುಟ್ಟ ನಂಜಿ ಬಂದರೆ, ಹೇಗಾಗುತ್ತದೆ ಎನ್ನುತ್ತಿ? ಬಂದು ಅವಳು ನಿಂತಾಗ, ಎದೆಗಳು ಹಾಡುತ್ತವೆ—ಎರಡಕ್ಕೆ ಒಂದೇ ತಂತಿ.

**೩೯. ನಂಜಿ–ರತ್ನ** ೧. 'ಸುಲಿದಿದ್ದ ಬಾಳೆಯಹಣ್ಣು ಇದ್ದಹಾಗೆ ತಲೆಯ ಮೇಲಿದ್ದಾನೆ ಚಂದ್ರ!' 'ಮುಡಿಸುವುದಕ್ಕೆ ಮಡಗಿದ್ದ (ಇಟ್ಟಿದ್ದ) ಮಲ್ಲಿಗೆ ದಂಡೆ ಇದ್ದಹಾಗಿದ್ದಾನೆ ಚಂದ್ರ!' ೨. 'ರತ್ನನಿಗೆ ಅದನ್ನೇ ತಿನ್ನಿಸುತ್ತಿದ್ದೆ, ಕೈಗಾದರೂ ಎಟಕಿಸು(ನಿಲುಕು)ತ್ತಿದ್ದರೆ!' 'ನಂಜಿಗೆ ಅದನ್ನೆ ಮುಡಿಸುತ್ತ ಇದ್ದೆ, ಕೈಗಾದರೂ ಎಟಕಿಸುತ್ತಿದ್ದರೆ!'

**೪೦. ನಂಜಿ ರತ್ನ ತೋಟಕ್ಕೆ ಹೋಗಿದ್ದರು** ೧. ನಂಜಿ ರತ್ನ ತೋಟಕ್ಕೆ ಹೋಗಿದ್ದರು. ಒಂದಾದರೂ ಮಾತನಾಡಲಿಲ್ಲ. ಅವರುಗಳು ಮಾತನಾಡಲಿಲ್ಲ ವೆಂದಲ್ಲ—ಆಡುವುದಕ್ಕೆ ಮನಸ್ಸಾಗಲಿಲ್ಲ! ೨. ನಂಜಿಯು ರತ್ನನಿಗೆ ತೋರಿಸಿದಳು, ಒಂದು ದುಂಬಿ ತಬ್ಬಿದ ಹೂವನ್ನು. ರತ್ನನ ಮನಸ್ಸಿನ ಹಡಗು ಸೇರಿತ್ತು, ನಂಜಿಯ ಮನಸ್ಸಿನ ರೇವನ್ನು. ೩. ಮನಸ್ಸಿನ ಜೋಡಿ ವೀಣೆಯ ಮುಂದೆ ಬಾಯಿಯ ಬುಡು ಬುಡಿಕೆಯೆ? ಮಾತು ಇಲ್ಲದೆಯೆ ಅರ್ಥವಾಗುತ್ತಿದ್ದರೆ, ಆಡುವವನು ಮನುಷ್ಯನೆ? ಕೋಣ!

**೪೧. ನಿನಗೆ ನೆನಪಿದೆಯೆ ನಂಜಿ?** ೧. ಒಂದೇ ಕೇರಿ(ಮನೆಗಳ ಗುಂಪು) ಯಲ್ಲಿ ಹುಟ್ಟಿ ಬೆಳೆದವರು, ಒಂದೇ ಬೀದಿಯಲ್ಲಿ ಹೊತ್ತು ಕಳೆದವರು, ನಾವುಗಳು ಆಡಿ ಮಾಡಿದ್ದೆಲ್ಲ? ಕಲ್ಲು, ಬಕ್ರಿ (ಹೆಂಚಿನ ಚೂರು) ಆರಿಸಿಕೊಳ್ಳುತ್ತ, ಗಂಡ ಹೆಂಡತಿ ಯರ ಸಂಸಾರವೆಂದು ಚಿಕ್ಕಂದಿನಲ್ಲಿ ನಾವು ಆಟಗಳು ಆಡಿದುದು? ೬. ರತ್ನ ನಂಜಿ ಗಂಡ ಹೆಂಡತಿ ಎಂದ ಕೇರಿಯವರ ಗೇಲಿ (ಹಾಸ್ಯ)ಯನ್ನು [ಕಾರಣವಾಗಿ] ಹಿಡಿದು, ನಾಚಿಕೊಂಡು ಮನೆಯಲ್ಲಿ ಅವಿತುಕೊಂಡುದು? ಲಗ್ನಕ್ಕೆ ಮುಂಚೆ ತೋಟಕ್ಕೆ ಹೋಗಿ, ಹೂವನ್ನು ಕಿತ್ತು ನಿನಗೆ (ನಿನ್ನನ್ನು) ಕೂಗಿ, 'ನನ್ನ ನಂಜಿ' ಎಂದು ನಾನು ಮುಡಿ ಸಿದ್ದು? ೩. ಲಗ್ನದ ದಿವಸ ನಿನ್ನ ಮುಖಕ್ಕೆ ನಾನು ಭಂಡಾರ(ಕುಂಕುಮ)ವನ್ನು ಹಣೆಯ ತುಂಬಾ ಬಳಿದು, ಕನ್ನಡಿ ತೋರಿಸಿದ್ದು, ನಿನಗೆ? ನೀನು ಮನೆಗೆ ಹೊಸ ದಾಗಿ ಬಂದವಳೆಂದು ನಿನ್ನ ಮುಖವನ್ನೇ ನೋಡಿ ಹಿಗ್ಗಿಕೊಳ್ಳುತ್ತ ಆ ಹೊತ್ತು ಚಾಕ್ರಿ (ಕೆಲಸ)ಗೆ ಹೋಗಲೇ ಇಲ್ಲ? ೪. ಹೊಸದಾಗಿ ಇಬ್ಬರೆ ಸಂಸಾರ ಹೂಡಿ, ಯೆಸರು (ಹಿಟ್ಟಿನ ಜೊತೆಗೆ ಉಣ್ಣುವ ಸಾರು), ಪಾಯಸ ಊಟ ಮಾಡಿ, ನೆನೆದರೆ ನನಗೇ ನಗು ಬರುತ್ತದೆ. 'ಇದ್ದ ದಿವಸ ಹೆಸರು ಹಿಟ್ಟು, ಇಲ್ಲದಿದ್ದರೆ ಹೊಟ್ಟೆಗೆ ಬಟ್ಟೆಯನ್ನು ಕಟ್ಟು' ಎಂದು ಹಾಯಾಗಿ (ನಿರಾತಂಕವಾಗಿ) ಬದುಕೋಣ ಎಂದೆವು. ೫. ಮನೆ

ಯಲ್ಲಿ ಒಂದು ದಿನ ತಿನ್ನುವುದಕ್ಕೆ ಇಲ್ಲದೆ, ನನಗೆ ಇಲ್ಲವೆಂದು ನೀನೂ ಒಲ್ಲದೆ (ಬೇಡವೆಂದು), ಕರೆದವರ ಹಟ್ಟಿ(ಮನೆ)ಗೆ ಹೋಗುವುದಿಲ್ಲವೆಂದುದು? ಆ ಹೊತ್ತೆಲ್ಲ ಹಿಟ್ಟೇ ಇಲ್ಲದೆ ಸಾಯುತ್ತಿದ್ದರೂ, ನಗುತ್ತ ಸೋಲದೆ, 'ಬದುಕುವುದು ತಿನ್ನುವುದಕ್ಕಲ್ಲ' ಎಂದು ಎಂದುದು? ೬. ಕಷ್ಟ ಸುಖ ಏನು ಬಂದರೂ, ನಿನಗೆ ನಾನೇ ನನಗೆ ನೀನೇ —ಮುಳುಗುವವನ ಬೆನ್ನಿನ ಬೆಂಡು ಇದ್ದಹಾಗೆ! ನಿನಗೆ ನೆನಪಿರಲಿ ನಂಜಿ! ಬಟ್ಟೆ ಹೊಟ್ಟೆಗೆ ಇಲ್ಲದಿದ್ದರೂ, ನಮ್ಮ ನಮ್ಮ ಪ್ರೀತಿ ಇರುವವರೆಗೂ, ದೇಹ ಹೋದರೂ ಮನಸ್ಸು ಹೋಗುವುದಿಲ್ಲ! ನಿನಗೆ ನೆನಪಿರಲಿ ನಂಜಿ!

**೪೨. ನಂಜಿಯ ಹೆಸರು** ೧. ಸಂಜೆಯಲ್ಲಿ 'ಓ ಲಕ್ಷ್ಮಣಾ!' ಎಂದು ಹೇಳಿ ಹಟ್ಟಿ(ಮನೆ)ಗೆ ಬಂದರೆ ಬೇಗ, ದಾರಿಯನ್ನು ನೋಡುತ್ತ ನಿಂತುಕೊಂಡಿದ್ದಾಳೆ ನಂಜಿ ಬಾಗಿಲಿನಲ್ಲಿ! ೨. ಜೀತ(ದುಡಿತ)ಕ್ಕೆ ಜೀವ ಬಲಿಕೊಟ್ಟ ಮೇಲೆ, ನಂಜಿಯೇ ಹೊಸ ಪ್ರಾಣ! ನಂಜಿಯನ್ನು ಏನಾದರೂ ನೆನೆಯದೆ ಹೋದರೆ, ಉಡುಗಿ(ಸ್ತಬ್ಧವಾಗಿ) ಹೋಗುತ್ತದೆ ಪ್ರಾಣ! ೩. ಜೀವವನ್ನು ಬೆಳೆಸುವುದಕ್ಕೆ ತಾಕತ್ತು (ಪುಷ್ಟಿಕೊಡುವ ವಸ್ತು) ಎಂದರೆ, ನಂಜಿಯ ನಾಮಸ್ಮರಣೆ! ಜೀವದ ಗಂಗೆ ಕೆಡದಹಾಗೆ ಇಡುವುದಕ್ಕೆ ನಂಜಿಯ ಹೆಸರೇ ಭರಣಿ!

**೪೩. ಕಣ್ಣು** ೧. ಮುಖಕ್ಕೆ ಎರಡು ಕಣ್ಣಾದರೆ, ಮನಸ್ಸಿಗೆ ಒಂದೆ! ಮನಸ್ಸಿನ ಒಂದರ ಮುಂದೆ ಎರಡೂ ಬಂದೇ (ಮುಚ್ಚಿದಂತೆ)! ಇಲ್ಲದಿದ್ದರೂ ಚೆಂದವೆ! ಲೋಕವನ್ನು ಹುಟ್ಟಿಸುತ್ತಿದ್ದರೆ ಮನಸ್ಸಿನ ಒಂದು ಕಣ್ಣು, ಲೋಕವನ್ನು ಹಾಳು ಮಾಡುತ್ತದೆ ಹೊರಗಿನ ಎರಡು ಕಣ್ಣು! ಮುಖದೊಳಗಿನ ಹುಣ್ಣು! ೨. 'ಸಿಕ್ಕಿದ ಹಾಗೆ ವರ್ಣಿಸುತ್ತಾರೆಯೆ ಈ ಕುಡಿದವನ ಹೆಣ್ಣನ್ನು! ಹೇಳುವುದಕ್ಕೆ ಏನಂತೆ ಈಗ? ಬರಿಯ ಮಾತಿನ ಬಣ್ಣ!' ಎನ್ನುವವನ ಕಣ್ಣು ಸಣ್ಣ! ನೀನು ಸಿಗಿಯುವ ಕಬ್ಬಂತೂ ಮುಕ್ಕುವುದಿಲ್ಲವೆ ಮಣ್ಣನ್ನು? ನಡುವೆ ಥೂ ಎಂದು ಆಚೆ ಉಗಿದಾಕ್ಷಣವೆ ಗಿಣ್ಣನ್ನು, ಕಬ್ಬು ಸೀ ಅಲ್ಲವೇನಣ್ಣ! ೩. ಸರಿಯಾಗಿ ನೋಡಬೇಕು ಎಂದೆಂದರೆ ಹೆಣ್ಣಿಗೆ, ರೆಪ್ಪೆಯ ಪರದೆಯನ್ನು ಹಾಕಿ ಮುಚ್ಚಬೇಕು ಕಣ್ಣಿಗೆ—ಹೊರಗಿನ ನಿನ್ನ ಕಣ್ಣಿಗೆ! ಮನಸ್ಸಿನ ಕಣ್ಣಮುಂದೆ ಅವಳ ಅರ್ಥ ಪೂರ್ತಿ! ಮನಸ್ಸಿನ ಕಣ್ಣಿಗೆಂದರೆ ಅವಳೇ ಆರಾಧ್ಯಮೂರ್ತಿ! ಅದಕ್ಕೇ ಮನಸ್ಸಿಗೆ ಅರ್ತಿ (ಪ್ರೀತಿ)!

**೪೪. ನನ್ನ ಪುಟ್ಟ ನಂಜಿ ನಕ್ಕರೆ** ೧. ಮೂಗ ಆದಹಾಗೆ ಆಗುತ್ತೇನೆ ನಾನು! ಹಾಡಬೇಕು ಎಂದರೆ ಮಾತೇ ಸಿಕ್ಕದು, ಉಕ್ಕಿಬರುತ್ತಿದ್ದರೆ ಅಕ್ಕರೆ! ೨. ಲಕ್ಕ್ ಎಂದು ಮತ್ತು (ಅಮಲು) ನನಗೆ ಹತ್ತಿಕೊಳ್ಳುತ್ತದೆ! ಝುಂ ಎಂದು ಹಿಗ್ಗುತ್ತ ಪದ ಹಾಡುತ್ತೇನೆ, ಆ ಮತ್ತು ನನಗೆ ಆಗಿ ಮಿಕ್ಕರೆ! ೩. ಹಾಡುವುದಕ್ಕೆ ಅಳತೆ ಗಿಳತೆ

ಇಲ್ಲ! ಮಾನ ಜ್ಞಾನ ಎಲ್ಲವೂ ತಿನ್ನುವುದೊಂದೆ—ಶೋೕಕರ್ರ್ೕ (ಶೋೕಕರು ತಿನ್ನುವುದು ಎಂದರೆ ಕೆಳಗೆ ಬೀಳುವುದು)! ೪. ಅರಳುತ್ತ ಹೊರಳುತ್ತ ಕಣ್ಣಿನ ಬೆಳಕು! ಹೇಗಿರುತ್ತದೆ ಮಲ್ಲಿಗೆ ಹೂವಿನಲ್ಲಿ ತಿಂಗಳ ಬೆಳಕು ಹೊಕ್ಕರೆ, ಹಾಗಿದೆ ನಂಜಿ ನಕ್ಕರೆ! ೫. ಘಳ್ ಎಂದು ಹಲ್ಲಿನ ಬೆಳಕು ಉಕ್ಕುತ್ತದೆ! ರೆಕ್ಕೆ ಬಿಳುಪನ್ನು ತೆಗೆದು ಎರಚಿದ ಹಾಗೆ ಸ್ನಾನಮಾಡಿದ ಕೊಕ್ಕರೆ! ೬. ನಾರದನ ವೀಣೆ ನಿಲ್ಲುವುದಿಲ್ಲ! ತುಂಬುರ ತನ್ನ ಹಾಡು ಅಡಗಿಸುತ್ತಾನೆ! ವಜ್ರದ ಮುಂದೆಯೇ ಬಕ್ರೆ (ಹೆಂಚಿನ ಚೂರು)! ೭. ಲೋಕವೇ ಮೆಚ್ಚಿಕೊಳ್ಳುತ್ತದೆ! ಮೆಚ್ಚಿಕೊಂಡು ಹೇಳುತ್ತದೆ: 'ನಂಜಿಯು ನಕ್ಕಾಗ ಸದ್ದು ಮಾಡುವವನಿಗೆ ಥೂಕ್ರೆ (ಉಗಿಯೊ)!' ೮. ಕದಲುವುದಕ್ಕೆ ಆಗದು ಕಟ್ಟಿ ಹಾಕಿದ ಹಾಗೆ! ಚಾಕರಿ ಗೀಕರಿ (ಕೆಲಸಗಿಲಸ) ಎಲ್ಲದಕ್ಕೂ ಆ ಹೊತ್ತಿಲ್ಲ ಚಕ್ಕರ್ರ್ೕ (ಸೊನ್ನೆಯೇ)! ೯. 'ಹೀಗೆ ಹೀಗೆ' ಎಂದು ಹೇಳುವುದಕ್ಕೆ ಬರದು! ಸಿಹಿ ಎನ್ನುವುದು ಶಬ್ದ ಮಾತ್ರ! ತಿಂದು ನೋಡಬೇಕು ಸಕ್ಕರೆ! ನೋಡಬೇಕು ನಂಜಿ ನಕ್ಕರೆ!

**೪೫. ನಂಜಿಯ ಗುಮಾನಿ** (ಸಂಶಯ) ೧. ನಾನು ಇನ್ನು ಯಾರಿಗೋ ನೋಡಿದೆನೆಂದು ಹೇಳಿ, ಇಲ್ಲದಿದ್ದ ಹತ್ತಿಯನ್ನು ಹಿಂಜಿ (ಬಿಡಿಸಿ), ಸಿಕ್ಕದಿದ್ದ ಬಿತ್ತ (ಬೀಜ)ವನ್ನು ಎತ್ತುವುದಕ್ಕೆ ನೋಡಿ, ರಾಂಗ್ (ಹಟ, ಮೊಂಡು) ಮಾಡಬಾರದು ನಂಜಿ! ೨. ನಿದ್ದೆಯಲ್ಲಿ ಹಿಡಿದು ನನ್ನನ್ನು ಎಬ್ಬಿಸುತ್ತ, 'ನಿನ್ನ ಹೆಸರೇನು?' ಎಂದೆನ್ನು; 'ಪುಟ್ಟನಂಜಿ!' ಎಂದೆನ್ನದೆ ಹೋದರೆ ಮಾತಿನ ಮೈಗೆ ತೊನ್ನು [ಸಹಿಸಲಾರದ ದೋಷ]! ೩. ಪಕ್ಕದ ಮುತ್ತಿನ ಕಂಬದ ಮುಂದೆಯೇ—ಇಲ್ಲದಿದ್ದ ಹೆಂಚಿಯ ಕಡ್ಡಿ (ಕಸಪೊರಕೆಯ ಕಡ್ಡಿ)? ನಿನಗೆ ಅದನ್ನೂ ನಾನು ಹೇಳೋಣವೆ— ಏಕೆ ಹೀಗಾದೆ ಮಡ್ಡಿ (ಮೂರ್ಖೆ)! ೪. ಬಲಗೈ ಇದ್ದೂ ಇಲ್ಲದಹಾಗೆಯೇ ಎಂದು ಹೇಳಿಪ ಹಾಗೆ ಎಡಚ, ಪ್ರೀತಿಯ ಪಟ್ಟಿಗೆ (ಹಿಡಿತಕ್ಕೆ) ಸಿಕ್ಕಿಕೊಂಡವರಿಗೆ ಜ್ಞಾನವಿದ್ದರೂ [ಅದು] ಪಡಚ (ನಾಶ)! ೫. ಹಾಳು ಗುಮಾನಿ (ಸಂಶಯ) ಎಂದರೆ— ಆಹುತಿ ಅನಾಮತ್ತಾಗಿ (ಸಂಪೂರ್ಣ) ಎಲ್ಲಾ! ನಮಗೆ ನಾವೇ ಮುರಿದುಕೊಳ್ಳಬಾರದು ಆಗಿಯುವುದಕ್ಕಿರುವ ಹಲ್ಲನ್ನು! ೬. ಈ ಕಡೆ ಪಕ್ಕದಲ್ಲಿ ಅಕ್ಷರವೂ, ಆ ಕಡೆ ಮನುಷ್ಯನ ಬುರುಡೆ, ರೂಪಾಯಿಗೆ ಇದ್ದಹಾಗೆ ಗುಮಾನಿಗೂ ಆಕಡೆ ಈಕಡೆ ಎರಡೆ! ಈ ಗುಮಾನಿಯೇ ನಾವು ಪ್ರೀತಿಗೆ ಕಟ್ಟುವ ಚಕ್ರಬಡ್ಡಿ (Compound interest)! ಈ ಗುಮಾನಿಯೇ ನಮ್ಮ ಪ್ರೀತಿಯನ್ನು ಅಳೆಯುವುದಕ್ಕೆ ಅಳತೆಕಡ್ಡಿ!

**೪೬. ಕಾರಣ** ೧. ಕೆಂಪು ಬಟ್ಟೆ ಕಾಣದೆ ಹೋದರೆ ಗೂಳಿಗೆ ರಕ್ತ ಕುದಿಯುವುದಿಲ್ಲ; ಸುಮ್ಮನೆ ಕುದಿಯುವುದಿಲ್ಲ. ನಂಜಿ ರತ್ನನಿಗೆ ಒದ್ದರೆ, ಕಾರಣ ಗೀರಣ ಹೇಳಿಕೊಂಡು ಒದೆಯುವುದಿಲ್ಲ; ಇದಕ್ಕೇ ಎಂದು ಒದೆಯುವುದಿಲ್ಲ. ೨. ರಾಗ

ಹಾಕುತ್ತ ರಾತ್ರಿ ಬರದೆ, ಸುಮ್ಮನೆ ಮಲ್ಲಿಗೆ ಅರಳುವುದಿಲ್ಲ; ಹಗಲಲ್ಲಿ ಅರಳುವುದಿಲ್ಲ. ರತ್ನನನ್ನು ಆಳುತ್ತ, ಮುತ್ತಿನಲ್ಲಿ ಹೂಳುತ್ತ, ನಂಜಿ ಇದಕ್ಕೇ ಎಂದು ಹೇಳುವುದಿಲ್ಲ; ರತ್ನ ಕೇಳುವುದಿಲ್ಲ. ೩. ನಂಜಿ! ನೀನು ನನಗೆ ಒದ್ದರೂ, ಬಿದ್ದರೂ, ಕಾರಣ ನಿನಗೇನೂ ಬೇಕಿಲ್ಲ; ನನಗೂ ಬೇಕಿಲ್ಲ. ಕಾರಣ ಗೀರಣ ಎಲ್ಲಾ ಇದೆ. ಕಣ್ಣಿಗೆ ಕಂಡರೂ ಕಾಣುವುದಿಲ್ಲ ; ಕೇಳುವುದು ಜಾಣ[ತನ]ವಲ್ಲ!

೪೭. **ನಮ್ಮ ನಮ್ಮ ಮಾತು** ೧. ಪುಟ್ಟನಂಜಿ! ಬಿರ್ಬಿರ್ನೆ (ಬೇಗ ಬೇಗ) ಬಾಗಿಲನ್ನು ತೆರೆದಿಡು. ಬೇವಾರ್ಸಿ ಬಂದಿದ್ದಾನೆ. ಕಾಯುತ್ತಿದ್ದಾನೆ. ತಡ (ಸಾವಕಾಶ) ವಾದರೆ ಗಾಳಿಯಾಗಿ ಬಂದು ಬಡಿದೇನು! ೨. ನನ್ನ ರತ್ನ! ನೀ ಬಂದು ಬಡಿಗಿಡಿ ಯುವುದು ಎಲ್ಲಿ ಬಂದಿತು! ಗಾಳಿಯಾಗಿ ನೀ ಬಂದರೆ ನನಗೇನು? ನಾನೊಂದು ಮೀನಾಗಿ ಹೊಳೆಯಲ್ಲಿ ಮುಳುಗಿಯೇನು! ೩. ಮೀನಾಗಿ ನೀನು ನೀರಿಗೆ ಮುಗುಚಿ ಗಿಗುಚಿಕೊಂಡರೆ ಏನಂತೆ? ನಿನಗೆ ನಾನು ಸುಮ್ಮ ಸುಮ್ಮನೆ ಬಿಟ್ಟೇನೆ!—ಬೆಸ್ತರವನು ನಾನಾಗಿ ಬಂದು ನಿನಗೆ ಹಿಡಿದೇನು! ೪. ಮೀನನ್ನು ಹಿಡಿಯಲು ನೀನು ಬೆಸ್ತನಾದರೆ ಏನೀಗ? ಮೋಡವಾಗಿ ನಾನು ಹಾರಿಹೋಗಿಯೇನು! ಆಕಾಶದಲ್ಲೆಲ್ಲ ಮೆಲ್ಲ ಮೆಲ್ಲನೆ ಜಾರಿಯೇನು! ೫. ಮೋಡವಾಗಿ ಮೇಲುಗಡೆ ಮೆಲ್ಲಮೆಲ್ಲನೆ ನೀನು ಹೋಗು. ಹನಿಮಳೆ ರೂಪವನ್ನು [ನಾನು] ತಾಳಿಯೇನು! ನಾನು ಬಂದು ನಿನ್ನ ಜೊತೆಗೆ ಹಾಯಾಗಿ (ನಿರಾತಂಕವಾಗಿ) ಬಾಳಿಯೇನು! ೬. ಹನಿಮಳೆ ನೀನಾಗಿ ನನ್ನನ್ನು ಏನಾದರೂ ಮುಟ್ಟಬಂದರೆ, ಭೂಮಿಯಲ್ಲಿ ಹಸುರು ಹುಲ್ಲು ಆದೇನು! ಹುಲ್ಲಾಗಿ ನಿನ್ನನ್ನು ಮರೆತು ಹೊರುವಾಗಿ (ಸಮೃದ್ಧಿಯಾಗಿ) ಬೆಳೆದೇನು! ೭. ನೀನು ಹಸುರು ಹುಲ್ಲಾಗಿ ಬೆಳೆದು ಬಾ, ಬೇಗಬೇಗ! ಕುರಿಯಾಗಿ ಹಾರುಹಾರುತ್ತ ಬಂದೇನು! ನಿನ್ನನ್ನು ತಬ್ಬಿ ಮುತ್ತಿಟ್ಟು ಮುಕ್ಕಿ ನಾ ಮುಗಿಸಿಯೇನು! ೮. ಕುರಿಯಾಗಿ ನೀನು ಬಂದು, ಹುಲ್ಲು ಮುಕ್ಕುವುದಾದರೆ, ಹೊಲಿಯುವ ಸೂಜಿ ನಾನು ಆದೇನು! ಚಿಪ್ಪಿಗನ ಬಟ್ಟೆಯಲ್ಲಿ ಹೊಕ್ಕು ನಾನು ನಡೆದೇನು! ೯. ಸೂಜಿಯಾಗಿ ಚಿಪ್ಪಿಗನ ಬಟ್ಟೆಯಲ್ಲಿ ನೀನು ಹೋದರೆ, ದಾರದ ಬದುಕನ್ನು ನಾನು ಹಿಡಿದೇನು! ನಗು ನಗುತ್ತ ಸೂಜಿಯ ಹಿಂದೆಯೇ ಬಂದೇನು!

೪೮. **ಮನಸ್ಸು-ಮೈ** ೧. ಕಣಜ (ಧಾನ್ಯ ತುಂಬುವ ಸ್ಥಳ) ಕಾಳು ಎರಡೂ ಕೂಡಿದಾಗ ಅಲ್ಲವೆ ಹಾಕುವುದು ಭರ್ತಿ [ಧಾನ್ಯ ತುಂಬುವುದು]? ಮನಸ್ಸು ಮೈ ಎರಡೂ ಸೇರಿಕೊಂಡರೆ, ಆಗಲೇ ಪ್ರೀತಿ ಪೂರ್ತಿ! ೨. ಮನಸ್ಸು ಮೈ ಮುತ್ತು ಕೊಟ್ಟ ಹಾಗಿತ್ತು—ಸಮುದ್ರ ಹಾರಿದ ಮಾರುತಿ! ಒಂದಿದ್ದರೆ ಇನ್ನೊಂದು ಇಲ್ಲದವ ರೆಂದರೆ—ಬಂಡಿ (ರಥ) ಇಲ್ಲದ ಸಾರಥಿ! ೩. ಮುತ್ತುಕೊಟ್ಟಹಾಗೆ ಆ ಮನಸ್ಸೂ

ಮೆಯ್ಯೂ ಲಗತ್ತಾಗಿ (ಒಟ್ಟಿಗೆ ಸೇರಿಕೊಂಡು) ಇಲ್ಲದಿದ್ದರೆ ಎಕ್ಕ (ನಾಶ)! ಯಾವುದು ಒಂದು ಇಲ್ಲದಿದ್ದರೂ, ಮಿಕ್ಕುದು ಇದ್ದೂ ಇಲ್ಲದ ಲೆಕ್ಕ!

**೪೯. ರತ್ನ** ೧. ದಾರಿಯಲ್ಲಿ ಹಾರೆ ಗುದ್ದಲಿ ಹಿಡಿದು, ರತ್ನ ಹಳ್ಳ ತೋಡುತ್ತಾನೆ! ಮೇಸ್ತ್ರಿ (ಕೂಲಿಗಳ ಮೇಲುವಿಚಾರಣೆಯುವ) ನೋಡುತ್ತಾನೆ! ತೋಡುತ್ತಿದ್ದ ಹಾಗೆಯೇ [ರತ್ನ] ಹಾರೆ ಊರಿ ನಿಲ್ಲುತ್ತಾನೆ! ಬೆಪ್ಪನ ಹಾಗೆ ನಿಲ್ಲುತ್ತಾನೆ. ೨. ಎದುರಿನ ಬೇಲಿಯಲ್ಲಿ ಬಿಟ್ಟಿದ್ದ ಹೂ ರತ್ನನ ಕಣ್ಣಿಗೆ ಬೀಳುತ್ತದೆ! ನೆನಪುಗಳು ಏಳುತ್ತವೆ! ಹೂವನ್ನು ಮುಡಿದಿದ್ದ ನಂಜಿಯು ಬೊಂಬೆ ಕಣ್ಣಿನ ಮುಂದೆ ಏಳುತ್ತದೆ! ಆಸೆ ಕೆರಳುತ್ತದೆ! ೩. ಹಿಡಿದಿದ್ದ ಹಾರೆಯನ್ನು ಹಾಗೇ ಬಿಟ್ಟು, ರತ್ನ ಕುಡಿದ ಹಾಗೆ ಹೋಗುತ್ತಾನೆ! ಮೇಸ್ತ್ರಿ ಕೂಗುತ್ತಾನೆ! ಮನೆಗೆ ಹೋಗುವವನಿಗೆ 'ಲೋ' ಎಂದೆಂದು ಕೂಗುತ್ತ ಲಾಗ ಹಾಕುತ್ತಾನೆ! ಕೂಗಿದರೆ ಕೂಗುತ್ತಾನೆ! ೪. ಹಟ್ಟಿ (ಮನೆ)ಯಲ್ಲಿ ಕಾಡಿಗೆ ಕಣ್ಣಿನ ನಂಜಿ ರತ್ನನನ್ನು ಕಂಡು ಉಕ್ಕುತ್ತಾಳೆ! ಕಣ್ಣಿನಲ್ಲಿ ಮುಕ್ಕುತ್ತಾಳೆ! ನಿಂತಿದ್ದ ನಂಜಿಯುನ್ನು ನೋಡುತ್ತಿದ್ದ ಹಾಗೆಯೇ ಇಬ್ಬರ ಮನಸ್ಸೂ ಹಿಗ್ಗುತ್ತದೆ! ಎರಡು [ಮನಸ್ಸು] ಒಂದಾಗುತ್ತದೆ!

**೫೦. ಗೋರಿ** ೧. ನನ್ನ ಪುಟ್ಟನಂಜಿಯುನ್ನು ಹೆಂಡ ಬಿಟ್ಟು ಕಣ್ಣು ತುಂಬಾ ಕುಡಿದೆ. ಪದಗಳು ಹಾಡುವುದು ಹೇಗೆ ಎಂದು ಹೇಳಿ ಅವಳನ್ನೇ ಪಟ್ಟಾಗಿ (ಬಿಡದ ಹಾಗೆ) ಹಿಡಿದೆ. ೨. ಮೂರು ಹೊತ್ತೂ 'ನಂಜಿ' ಎಂದೆಂದು, ಅವಳ ಹಾಡೇ ನನಗೆ ಮಗ್ಗಲು (ಜೊತೆಗೆ). ನಂಜಿ ಹೋದರೂ ನೆನಪು ಹೋಗಲಿಲ್ಲ; ನೆನಪು ಹಾಡಿಸುತ್ತದೆ ಈಗಲೂ. ೩. ವಸ್ತು ಹೋದರೆ, ನೆರಳೂ ಕೂಡ ಜೊತೆಯಲ್ಲಿ ಹೋಗುವುದು ತತ್ವ (ಸಹಜವಾದುದು); ನಂಜಿ ಹೋಗಿ ನೆನಪು ಉಳಿಯುವುದು ನನ್ನ ಪುಟ್ಟನಂಜಿಯು ಮಹತ್ವ! ೪. ಹಿಂದೆ ನಾನು ಹಾಡುತ್ತಿದ್ದುದು ಇದ್ದವಳ ಬಾವುಟ (ಧ್ವಜ)ಕ್ಕೆ ಬತೇರಿ (ಕೋಟೆಯ ಪ್ರಾಕಾರದ ಉನ್ನತ ಸ್ಥಳ)! ಈಗ ನಾನು ಹಾಡುತ್ತಾ ಇತ್ತೆಂದರೆ, ಅದೇ ಇಲ್ಲದವಳ ನೆನಪಿಗೆ ಗೋರಿ (ಸಮಾಧಿಯ ಚಿಹ್ನೆ)!

**೫೧. ರತ್ನ ಬೇಸಾರ್ಸಿ** ೧. ಅಯ್ಯನವರ ಹೊಲದಲ್ಲಿ ಚಾಕರಿ (ಕೆಲಸ) ಮಾಡುತ್ತ ಸಂಜೆ ಆಯಿತೆಂದರೆ, ಚಿಂತೆ ಮಾಡುತ್ತೇನೆ: 'ಹೇಗಿರುತ್ತದೆ ನಂಜಿ ಎದ್ದು ಬಂದರೆ [ಎಂದು]?' ೨. ನಂಜಿಯು ನೆನಪಾಯಿತು. ಹಾದಿಯ ಗಿಡದಲ್ಲಿ ಹೂ ಜಲ್ಜಲ್ದಿ (ಬೇಗ ಬೇಗ) ಕುಯಿದಹಾಗೆಲ್ಲ, ಹೆಚ್ಚಿಕೊಳ್ಳುತ್ತದೆ ಆಸೆ ಬಹಳ ಬಲಿದು! ೩. ಹೂವು ಕುಯಿದರೆ ಆ ಸಂತೋಷವನ್ನು, ಅದನ್ನು ಎಲ್ಲಿ ಹಿಡಿಸೋಣ? ಚಿಂತಿಸುತ್ತ ನಿಂತುಕೊಳ್ಳುತ್ತೇನೆ: 'ಅಯ್ಯೋ! ಯಾರಿಗೆ ಮುಡಿಸೋಣ!' [ಎಂದು]. ೪. ನಾನು ಹೇಗೆ ಹೋಗುತ್ತೇನೆ ಅದೆ ಗೊತ್ತಿಲ್ಲದೆ ನಿಂತಿದ್ದ ಹಾಗೆಯೇ ನಡೆಯುತ್ತಾ

ಇದ್ದರೆ, ಬರುತ್ತೇನೆ ನಾನು ನಮ್ಮ ಗುಡಿಸಿಲ ತಾವಿಗೆಯೆ (ಹತ್ತಿರಕ್ಕೇ). ೫. ಗುಡಿಸಿಲ ಬೀಗ ತುಕ್ಕು (ಕಬ್ಬಿಣದಲ್ಲಿ ಹುಟ್ಟುವ ಕೊಳೆ) ಹಿಡಿದಿದೆ. ನಂಜಿ ಅಲ್ಲಿಲ್ಲ. ಕಣ್ಣೀರು ತುಂಬಿಕೊಂಡು ನೋಡುತ್ತೇನೆ ಆಗ, ಮನೆ ಮೇಲೆ ಮಳೆಬಿಲ್ಲನ್ನು! ೬. ಗುಡಿಸಿಲ ಬಾಗಿಲ ಬೀಗದ ಹಾಗೆಯೇ ಮನಸ್ಸಿನ ರಾಗವೂ; 'ನಂಜಿ ಇಲ್ಲದ ಮನೆಗೆ ಏಕೆ ಬರುತ್ತಿ?' ಎನ್ನುತ್ತದೆ ಬೀಗವೂ! ೭. ರತ್ನನ ನಂಜಿಗೆ ಮುಡಿಸಬೇಕೆಂದು ತಂದಿದ್ದ ಹೂವನ್ನೆಲ್ಲಾ ನಾವು ಇದ್ದ ಗುಡಿಸಲ ಮುಂದೆ ಇಡುತ್ತೇನೆ. ಬೇರೆ ತಾವು (ಸ್ಥಳ) ಇಲ್ಲ. ೮. ಹೀಗೆ ಹೂ ಮುಡಿಸಿ ಹೋಗುತ್ತೇನೆ—ಹಾಗೇ ಬಗ್ಗಿಕೊಂಡು ಮುಖ ಮರೆಸಿ; ನಾನು ಹೇಗೆ ಹೋದರೆ ತಾನೇ ಏನು? ರತ್ನ ಬೇವಾರ್ಸಿ (ತಬ್ಬಲಿ)!

**೫೨. ನಂಜಿಗೆ** ೧. ನೀನು ನನ್ನ ಹಟ್ಟಿ (ಮನೆ)ಗೆ ಬೆಳಕಿನ ಹಾಗಿದ್ದೆ ನಂಜು—ಮಾಗಿಯಲ್ಲಿ ಹುಲ್ಲಮೇಲೆ ಮಲಗಿದ್ದ ಹಾಗೆ ಮಂಜು! ಮಾಗಿ ಕುಗ್ಗಿತು! ಬೇಸಿಗೆ ನುಗ್ಗಿತು! ಇದ್ದಕ್ಕಿದ್ದ ಹಾಗೆ ಮಾಯವಾಗಿ ಹೋಯಿತು ಮಂಜು! ನನಗೂ ನಿನಗೂ ಹೇಗೆ ಅಗಲಿಹೋಯಿತು, ನಂಜು! ೨. ಶ್ರೀರಂಗಪಟ್ಟಣದ ತಾವು (ಹತ್ತಿರ) ಕಾವೇರಿ ಒಡೆದು, ಎರಡು ಹೋಳಾಗಿ ಪಟ್ಟಣದ ಸುತ್ತ ನಡೆದು, ಸಂಗಮದಲ್ಲಿ ಸೇರಿಕೊಂಡು, ಮರಳಿ (ಪುನಃ) ಮುಂದಕ್ಕೆ ಹೋದುದು ನಮಗೆ ಜ್ಞಾನದ ಪಂಜು (ಕೈದೀವಿಗೆ)! ಈಗ ಅಗಲಿದರೇನು? ಮುಂದೆ ಸೇರುತ್ತೇವೆ ನಂಜು! ೩. ಹಗಲು ಓಡಿಹೋಗುತ್ತದೆ ರಾತ್ರಿ ಬಂತೆಂದು ಅಂಜಿ! ರಾತ್ರಿ ಮುಗಿದುಹೋದರೆ ಹಗಲೇ ಅಲ್ಲವೆ ನಂಜಿ! ರಾತ್ರಿ ಬಿದ್ದಿತು! ಹಗಲೇ ಬಂದಿತು! ಹೋಗುವುದು ಮರಳಿ ಬರುವುದಕ್ಕೇ ಅಲ್ಲವ್ವೆ ನಂಜಿ! ಆ ನಂಬಿಕೆ ನನ್ನ ಜೀವವನ್ನು ಉಳಿಸುವ ಗಂಜಿ!

## ರುಸ್ತುಂ ರತ್ನ

**೫೩. ಮಡಿಕೇರಿಯಲ್ಲಿ ರತ್ನ.** ೧. ಮಡಿಕೇರಿಯಲ್ಲಿ ರತ್ನ, ಕಂಡನು ಹೊಸ ಮತ್ತನ್ನು (ಅಮಲನ್ನು)! ೨. 'ಮಡಿಕೇರಿಯಲ್ಲಿ ಮಡಿಕೆ ಹೆಂಡ ಹೀರದಿದ್ದರೆ, ಅಲ್ಲಿಗೆ ಹೋದುದೂ ದಂಡ (ವ್ಯರ್ಥ)!' ಎಂದು ರತ್ನನು ಪಡಕಾನೆಗೆ ಹೊರಟು, ಬೆಟ್ಟದ ನೆತ್ತಿಯ ಮೇಲೆ ಹೋಗುತ್ತಿದ್ದ ಹಾಗೆಯೇ ನಿಂತ! ಕಲ್ಲಾದ ಹಾಗೆ ಕುಳಿತ! ೩. ಸುತ್ತ ಸಾಯುವ ಬಿಸಿಲಿನ ಚಾಪೆ! ಅಲ್ಲಲ್ಲೇ ಒಸಿ (ಸ್ವಲ್ಪ) ನೆರಳಿನ ತೇಪೆ(patch)! ಅಲೆ ಅಲೆಯಾಗಿ ಬಿಸಿಲಿನ ಜೊತೆಗೆ ಸುತ್ತಿನ ಗುಡ್ಡಗಳು ಕುಣಿದರೆ ಮೆತ್ತಗೆ, ಮನಸ್ಸಿಗೆ ಹರುಷ ತರುತ್ತ, ರತ್ನ ಹೆಂಡ ಮರೆತ! ೪. 'ಮುದುಕರ ಸಾವೇ ನೋಡಲು ಚೆನ್ನ!' ಎಂದರೆ ಸೂರ್ಯ ಸಾಯುವೊಲ್ಲೆ ಎಂದ! 'ಸಾಯುವ ಮುದುಕ ಸಂಜೆಯ ಸೂರ್ಯ ನಗುತ್ತ ನಿಲ್ಲುವುದಕ್ಕೆ ಇವನಿಗೇನು ಕಾರ್ಯ?' ಎಂದು ಹಿಂದಕ್ಕೆ ತಿರುಗಿ

ನೋಡಿದೆ—ಬಂತು ಗಿರ್ಕಿ (ಭ್ರಮಣೆ)! ೫. ದೇವರದು ಒಂದು ಚೆಂದದ ಸ್ತೋತ್ರ, ಕೊಡಗಿನ ಮೇಲಿನ ಒಂದು ನಕ್ಷತ್ರ, ಕೊಡಗಿನ ಒಂದು ಹೂ ಗಾಳಿಯಲ್ಲಿ ತೇಲುತ್ತ ಬಂದಹಾಗಿದ್ದಳು—ಹತ್ತಿರ ಕಾಲ ತಾವು (ಬಳಿ), ಒಂದು ಕೊಡಗಿನ ಹುಡುಗಿ! ಐದಾರು ವರುಷದ ಹುಡುಗಿ! ೬. ಕೊಡಗಿನ ತೋಟದ ಕಾಫಿಯ ಹಣ್ಣು ತುಟಿಗಳು! ಇರುಳಿನ ಬೆಳಕೇ (ನಕ್ಷತ್ರ) ಕಣ್ಣು! ಕೆನ್ನೆ ಅಂತೂ ಕೊಡಗಿನ ಕಿತ್ತಿಳೆ! ಅವಳು ಹೇಳಿದಳು ನಾನು ಕೇಳೂತ್ಲೆ (ಕೇಳಿದ ತತ್ಕ್ಷಣ): 'ನಿನಗೆ ಹೆಸರೇನಮ್ಮ?' 'ನನ್ನ ಹೆಸರು ಪೂವಮ್ಮ!' ೭. 'ಪೂವಮ್ಮ!' ಹಾ! ಎಂತಹ ಹೆಸರು! ಕಣ್ಣಿಗೆ ಚಿತ್ರ ಕಟ್ಟುವ ಹೆಸರು! ರೂಪು ರಾಗಕ್ಕೆ ತಕ್ಕಂತಹ ಹೆಸರು! ಹೇಗೆ ನೋಡಿದರೂ ಒಪ್ಪುವ ಹೆಸರು! ಪೂವಮ್ಮಾ! ೮. ಅವಳನ್ನು ನೋಡೂತ್ಲೆ (ನೋಡಿದ ಕ್ಷಣ) ನನಗೆ ಮತ್ತು (ಅಮಲು) ಆಯಿತು! ಅವಳ ಮಾತು ಕೇಳಿ ಒಂದು [ಮತ್ತು] ಹತ್ತಾಯಿತು! ಅವಳ ಮಾತು ಇನ್ನೂ ಕೇಳಬೇಕೆಂದು 'ನಾನು ಯಾರು ಗೊತ್ತೆ?' ಎಂದರೆ 'ಹ್ಞೂ' ಎಂದು 'ನೀನು ಹೆಂಡಕುಡಕ' ಎಂದಳು! ನಗುತ್ತ ಹತ್ತಿರ ಬಂದಳು! ೯. 'ನೀನು ನಾನು ಕುಡಿಯುವುದು ಎಲ್ಲಿ ನೋಡಿದೆಯಮ್ಮ?' ಎಂದರೆ, 'ಯಾವನಿಗೆ ಇದೆ ಜಮ್ಮ (ಹದಿನಾರಾಣೆ ಕೊಡಗರ ಆಜನ್ಮ ಸಿದ್ಧವಾದ ಕೆಲವು ಹಕ್ಕುಗಳು), ಅವನಿಗೆ ಹೇಳುತ್ತೇವೆ ಕೊಡವ ಎಂದೆಂದು! ಕುಡಿದ ಹಾಗೆ ಹಾಡುವವನು ಕುಡಿಕ!' ಎಂದು ಎಂದು, ತೊಡೆಯನ್ನು ಹತ್ತಿದಳು ಮೆಲ್ಲಗೆ! ಕುಡಿದವನೆಂದರೆ ಸಲುಗೆ! ೧೦. ಕತ್ತಿನ ಸುತ್ತ ಕೈಹಾಕಿಕೊಂಡು, 'ಅಣ್ಣ ರತ್ನ' ಎಂದು ನಕ್ಕುಕೊಂಡು, 'ಹೆಂಡದ ಪದಗಳನ್ನು ಹೇಳು, ನೋಡೋಣ! ನಾನೂ ನಿನ್ನ ಹಾಗೆ ಕಲಿತು ಹಾಡೋಣ!' ಎಂದಳು ಮುಖವನ್ನು ನೋಡಿ! ಕಣ್ಣನ್ನು ದೊಡ್ಡದುಮಾಡಿ! ೧೧. ಇಲ್ಲದಿದ್ದ ತಂಗಿ ಆಗ ಹುಟ್ಟಿದಳು—ಪೂವಮ್ಮನೇ ನನಗೆ ಮೊದಲು! ತಂಗಿ ಹುಟ್ಟಿದ ದಿವಸವೆಂದು ಹೇಳಿ, ಹಾಡಿದೆ—ಹೆಂಗಸು ಹಿಡಿದ ಹಾಗೆ ತಾಲಿ(ಮಾಂಗಲ್ಯ)ಯನ್ನು—ಸೂರ್ಯ ಮುಳುಗುವುದು ಕಾಣದೆ, ಹೆಂಡ ಬೇಕು ಎಂದು ಎನ್ನದೆ!

**೫೪. ಮಡಿಕೇರಿಯಲ್ಲಿ ಮಂಜು** ೧. ಭೂಮಿಯನ್ನು ತಬ್ಬಿದ ಮೋಡವಿದ್ದ ಹಾಗೆ, ಬೆಳ್ಳಿ ಬಳಿದಿದ್ದ ರೋಡು (ಹಾದಿ) ಇದ್ದ ಹಾಗೆ, ಸಾಫಾಗಿ (ಒಂದೇ ಸಮನಾಗಿ) ಹಳ್ಳ ತಿಟ್ಟು ಇಲ್ಲದ ಹಾಗೆ, ಮಡಿಕೇರಿಯಲ್ಲಿ ಮಂಜು! ಮಡಗಿದ್ದುದು (ಇಟ್ಟಿದು) ಅಲ್ಲೇ ಮಡಗಿ (ಇಟ್ಟಿ)ದ್ದ ಹಾಗೆ, ಲಂಗರು (ಬೀಳ್ಗುಂಡು—anchor) ಬಿದ್ದಿದ್ದ ಹಡಗು ಇದ್ದಹಾಗೆ, ಶೀತಕ್ಕೆ ಶಕ್ತಿ ಉಡಗಿ (ಸ್ತಬ್ಧವಾಗಿ) ಹೋದ ಹಾಗೆ, ಅಳ್ಳಾಡವೊಲ್ಲದು ಮಂಜು! ೨. ತಾಯಿ ಮಗುವನ್ನು ಎತ್ತಿಕೊಂಡ ಹಾಗೆ, ಒಂದಕ್ಕೆ ಒಂದು ಹತ್ತಿಕೊಂಡ ಹಾಗೆ, ಮಡಿಕೇರಿಯನ್ನು ಎದೆಗೆ ಒತ್ತಿಕೊಂಡು ಜೂಗಡಿ

ಸುತ್ತಿತ್ತು ಮಂಜು! ಮಲಗುವುದಕ್ಕೆ ಸೊಳ್ಳೆ ಪರದೆ ಕಟ್ಟಿ, ಹೊದೆಯುವುದಕ್ಕೆ ಒಗೆದಿದ್ದ ದುಪಟಿ ಕೊಟ್ಟು, ಪಕ್ಕದಲ್ಲಿ ಗಂಧದ ಧೂಪ ಹಾಕಿದ ಹಾಗೆ ಮಡಿಕೇರಿಯ ಮೇಲೆ ಮಂಜು! ೩. ಮಂಜಿನ ಮುಸಕಿನ ಕಾವಲಿ (ಹುಲ್ಲುಗಾವಲಿ)ನಲ್ಲಿ ಒಣಗಿದ್ದ ಉದ್ದವಾದ ಹುಲ್ಲಿನಲ್ಲಿ, ಒಳಗೆಯೇ ಏನೋ ಸರಿದುಹೋದ ಹಾಗೆ ಅಲುಗಾಡು ತ್ತಿತ್ತು ಮಂಜು! ನಡೆಯುವ ದೊಡ್ಡ ದೊಡ್ಡ ದೇವಸ್ಥಾನದ ಹಾಗೆ, ಪಟ್ಟಣದ ಸುತ್ತಿನ ಕಾವಲಿನ (ಪಹರೆಯ) ಹಾಗೆ, ಅಲ್ಲಲ್ಲೇ ಹಾಗೆ ಹಾಗೆಯೇ ಗಸ್ತು (ಪಹರೆ—patrol) ಹಾಕುತ್ತಿತ್ತು ಮಂಜು! ೪. ಸೂರ್ಯನನ್ನು ಕರೆಯುವುದಕ್ಕೆ ಬಂದು ನಿಂತವರು, ಕೊಡಗಿನ ಎಲ್ಲಾ ಪೂವಮ್ಮನವರು, ತೆಳ್ಳನೆಯ ಬೆಳ್ಳನೆಯ ಬಟ್ಟೆಯನ್ನು ಹಾಕಿ ಬಂದಹಾಗಿತ್ತು ಮಂಜು! ಚಿಮ್ಮುತ್ತಾ ಇದ್ದರೆ ಎಳೆಬಿಸಿಲಿನ ಕೆಂಪು, ಮಂಜಿನ ಬಣ್ಣ ಕಣ್ಣಿಗೆ ತಂಪು! ಕೊಡಗಿನ ಲಕ್ಷ್ಮಿಯರು ಪೂವಮ್ಮನವರಿಗೆ ಹಾಲಿನ ಸಮುದ್ರವೀ ಮಂಜು! ೫. ಹಗಲೇ ಬರಲಿ, ರಾತ್ರಿಯೇ ಬರಲಿ, ಬಿಸಿಲು ನೆರಳು ಏನೇ ಇರಲಿ, ಕಣ್ಣು ಮರೆಯಾಗುವುದಕ್ಕೆ ತಾವು (ಅವಕಾಶ) ಕೊಡವೊಲ್ಲದು ಮಡಿಕೇರಿಗೆ ಮಂಜು! ತೈಲ ನೀರಿನ ಮೇಲಿದ್ದ ಹಾಗೆ, ಪೂವಮ್ಮ—ನನ್ನ ತಂಗಿ ಇದ್ದ ಹಾಗೆ, ಬಿಟ್ಟೂಬಿಡದ ಹಾಗೆ ಹಿಡಿದುಕೊಳ್ಳುತ್ತಿತ್ತು ಮಡಿಕೇರಿಗೆ ಮಂಜು!

**೫೫. ರೆ** ೧. ನಾನು ಸಂಪಾದಿಸಿದ ಬಿಡುಕಾಸು ಎಲ್ಲಾ ಬೆಳ್ಳಿಯ ರೂಪಾಯಿ ಆದರೆ—ಕೊಂಡುಕೊಳ್ಳುವುದು ಒಂದು ಹೆಂಡದ ಬುರುಡೆ ನಾನೂರು ಬುರುಡೆ ಆದರೆ ೨. ಬಾಯಿ ಹೊಟ್ಟೆ ಎಲ್ಲಾ ನನಗೆ ಹೆಚ್ಚಿಕೊಂಡು ಐನೂರು ಆದರೆ—ನನ್ನ ಜರ್ಬೇನು! ನನ್ನ ಷೋಕೇನು! ಆಗ ನನ್ನನ್ನು ನೋಡಬೇಕಾದರೆ! ೩. ಆಗುವುದಿಲ್ಲ, ಹೋಗು ವುದಿಲ್ಲ, 'ರೆ' ಪ್ರಪಂಚದ ಬಾಬತ್ತು (ವಿಚಾರ)! ಆದರೂ ಕೂಡ 'ರೆ' ಎಂದು ಎಂದರೆ ಬಹಳ ಸುಖದ ಬಾಬತ್ತು (ವಿಚಾರ)! ೪. 'ರೆ' ಎನ್ನುವ ಕನಸಿನ ಪ್ರಪಂಚ ದಲ್ಲಿ ಬಹಳ ಸಂತೋಷ ಆಗುತ್ತದೆ. ಹುಲ್ಲಿನ ಕಂತೆ (ಕಟ್ಟು) ಹೊತ್ತುಕೊಂಡ ಹಾಗೆ ಬದುಕುವುದು ಹಗುರವಾಗುತ್ತದೆ! ೫. ಮುಳುಗುವ ಮನುಷ್ಯನಿಗೆ ಹೊಳೆಯಲ್ಲಿ ಒಂದು ದೋಣಿ ಸಿಕ್ಕಿದ ರೀತಿ, ಸಂಕಟಪಟ್ಟುಕೊಂಡು ಸಾಯುವವನಿಗೆ 'ರೆ' ಎಂದರೆ ಬಹಳ ಪ್ರೀತಿ! ೬. 'ರೆ' ಎಂದು ರಾಗ ಎಳೆಯುವುದೆಲ್ಲ ನಡೆದುಬಿಡುವ ಹಾಗಿದ್ದರೆ—ಬೆಟ್ಟ ಕುಟ್ಟಿ(ಬಾಯಿ ಬಡಿದು)ಕೊಂಡು ಓಡಿಹೋಗುತ್ತದೆ, ಎಡದ ಕಾಲಿನಿಂದ ಒದ್ದರೆ! ೭. 'ರೆ' ಎನ್ನುವುದು ಆಗಲಿ, ಆಗದೆ ಹೋಗಲಿ, ಅದರಿಂದ ಏನಾಗಬೇಕು? 'ರೆ' ಎಂದು ಎಂದುಕೊಂಡು ಕಷ್ಟವನ್ನೆಲ್ಲ ಮರೆಯುವುದು—ಅಷ್ಟೆ ಸಾಕು! ೮. 'ಆದರೆ ಗೀದರೆ' ಎಂದುಕೊಂಡಿದ್ದರೆ ಸುಖವಾಗಿರಬಹುದೆಂದರೆ—'ರೆ' ಎನ್ನುವ ಅಕ್ಷರವು ಎಂತಹುದಣ್ಣ! ಅರೇ ರೇ ರೇ ರೇ ರೇ! [ಆಶ್ಚರ್ಯ]

**೫೬. ಚಿಂತೆ** ೧. ಹಾವಿಗೆ ಮುತ್ತು ಇಡುವುದು, ಹುಲಿಗೆ ಹಲ್ಲು ತಿಕ್ಕುವುದು, ಚಿಂತೆಗೆ ಎದೆಯಲ್ಲಿ ತಾವು (ಅವಕಾಶ) ಕೊಡುವುದು—ಎಲ್ಲಾ ಒಂದೇ ತೂಕಿ (ಭಾರವುಳ್ಳದ್ದು) [ಒಂದೇ ಸಮ]! ಕೇಳಬಾರದು ಬಾಕಿ (ಮಿಕ್ಕುದನ್ನು)! ೨. ಉಗನಿ (ಈ ಹಂಬು ಹಬ್ಬಿದ ಕಡೆ ಹಾಳು) ಹಬ್ಬಿಕೊಂಡ ಹಾಗೆ, ಕುಟ್ಟಿ (ಬಿದಿರನ್ನು ಒಳಗೇ ತಿಂದು ಹುಡಿಮಾಡುವ ಹುಳು) ಹಿಡಿದುಕೊಂಡ ಹಾಗೆ, ಗೆದ್ದಲಿನ ಹಾಗೆ ಹತ್ತಿಕೊಂಡು ಬಂದು ಮನುಷ್ಯನನ್ನು ಮುರಿದು ಮುಕ್ಕಿಕೊಳ್ಳುತ್ತದೆ—ದೊಡ್ಡದು ಈ ಮಾರಿ—ಚಿಂತೆ! ೩. ಬೆಂಕಿ ಮೈಮೇಲೆ ಬಿದ್ದರೆ, ನಾವು ಅದನ್ನು ಆರಿಸದಿದ್ದರೆ, ಧಗ್ಗೆಂದು ಹತ್ತಿಕೊಂಡು ಉರಿದು ನಮ್ಮನ್ನು ಮಾಡುತ್ತದೆ ಬೂದಿಯಂತೆ! ಬೆಂಕಿಯೇ—ಈ ಚಿಂತೆ! ೪. ಚಿಂತೆ ಬರುತ್ತಿದ್ದ ಹಾಗೆಯೇ, ತೆಗೆದುಕೋ—ದೊಡ್ಡ ದಂಗೆ (ಕ್ರಾಂತಿ)! ಚಿಂತೆಗೇನಾದರೂ ನೀನು ಶರಣಾದರೆ, ನಿನಗೆ ಎಕ್ಕ (ನಾಶ) ಗಟ್ಟಿ (ಖಂಡಿತ)! ಚಿಂತೆಗೆ ಊಟ ಬಿಟ್ಟಿ! ೫. ಚಿಂತೆ ಬರುತ್ತಿದ್ದ ಹಾಗೆಯೇ ಗುರುತೇ ಗೊತ್ತಾಗದ ಹಾಗೆ ಹಿಡಿದುಕೊಂಡು ಚೆನ್ನಾಗಿ ತದಕಿ (ಬಡಿದು) ಹಾಕಿದರೆ, ಕರೆದರೂ ತಿರುಗಿ ಬರದು! ಜಪ್ಪಯ್ಯ ಎಂದರೂ [ಬರಬೇಕೆಂದು ಹಟಹಿಡಿದರೂ] ಬರದು! ೬. ಚಿಂತೆಯನ್ನು ಕಂಡವರು ನಾವು! ಚಿಂತೆಗೆ ಇಕ್ಕಿ (ಬಡಿ)ದವರು ನಾವು! ನಮ್ಮಹಾಗೆ ಸಲೀಸಾಗ (ನಿರಾತಂಕವಾಗ)ಬೇಕೆಂದರೆ, ಚಿಂತೆಯನ್ನು ಹಿಡಿದು ಧ್ವಂಸ ಮಾಡಲೇ ಬೇಕು, ಮನುಷ್ಯ!

**೫೭. ಜ್ಞಾನದ ದೀಪ** ೧. ಹೆಂಡ ಕುಡಿದವನ ಕಂತೆ (ಹಾಳು ಹರಟೆ) ಎಂದು ಹೇಳಿ ನಗದೆ, ಹೇಳುವುದು ಕೇಳು; ಒಂದು ದಿನವಾದರೂ ಸಹಜ (ಯಥಾರ್ಥ) ತಿಳಿದುಕೋ—ಇದ್ದೇ ಇರುತ್ತದೆ ಗೋಳು! ೨. ಬೀದಿಯ ದೀಪ ಇರುತ್ತದೆ ಹಾಗೆಯೇ—ಇರುವ ಜಾಗ (ಸ್ಥಳ)ದಲ್ಲಿಯೇ; ನಡೆಯುತ್ತಾ ಇದ್ದರೆ ನೆರಳೊಂದು ಮಾತ್ರ ಬರುತ್ತದೆ ಹಿಂದುಗಡೆಯೇ! ೩. ದೀಪದ ಬೆಳಕು ಬೇಕೆಂದು ಎಂದರೆ, ಹೋಗಬೇಕು ಅವರ ತಾವಿಗೇನೆ (ಹತ್ತಿರಕ್ಕೇ)! ನೆರಳಿನ ಕತ್ತಲೆ ಬೇಡ ಎಂದು ಎಂದರೂ ಬರುತ್ತದೆ ಹಿಂದುಗಡೆಯೇ! ೪. ಇದನ್ನು ಕಾಣುತ್ತ ಕಾಣುತ್ತ, ನನಗೆ ನೆನಪಿಗೆ ಬಂದಹಾಗಾಯಿತು—'ಬೆಳಕೇ ಜ್ಞಾನ! ಕತ್ತಲು ಅಜ್ಞಾನ!' ಎನ್ನುವ ದೊಡ್ಡವರ ಮಾತು! ೫. 'ಜ್ಞಾನಕ್ಕೆ ಮನುಷ್ಯ ಕಷ್ಟ ಬೀಳಬೇಕು' ಎನ್ನುವ ದೊಡ್ಡವರ ಮಾತು, 'ಅಜ್ಞಾನಕ್ಕೆ ಏನೂ ಬೇಡ' ಎನ್ನುವುದು ಸಹಜ ಆದಹಾಗಾಯಿತು! ೬. ದೀಪದ ತಾಕೆ (ಬಳಿಗೆ) ಬಂತೆಂದರೆ—ಅದೋ! ಕಾಲಿನ ಕೆಳಗೆ ನೆರಳು! 'ಅಜ್ಞಾನವೆಲ್ಲ ಜ್ಞಾನಕ್ಕೆ ಶರಣು' ಎನ್ನುವುದು ಅದಕ್ಕೆ ತಿರುಳು! ೭. ದೊಡ್ಡ ದೊಡ್ಡ ಸತ್ಯ ನಮ್ಮ ಮುಂದೆಯೇ ಬಿದ್ದುಕೊಂಡು ಒದ್ದಾಡುತ್ತಿದ್ದರೂ

ಸುಮ್ಮನೆ ಇದ್ದೇವೆ. ಯಾವಾಗ—ಅದನ್ನು ನಾವುಗಳು ಕಲಿಯುವುದಾದರೂ? ೮. ತಿಳಿದವರ ಕಾಲು ಹಿಡಿದುಕೊಂಡು ಕಲಿಯುವವರು ಹಿಂದಿನ ಕಾಲದಲ್ಲಿ ಇದ್ದರು; ಕಲಿಯುವ ಮಂದಿ ಎಲ್ಲಿ ಇದ್ದಾರೆ ಈಗ—ಕಲಿಸುವವರು ಮೇಲೆ ಬಂದು ಬಿದ್ದರೂ!

**೫೮. ದುಃಖ** ೧. ಕಹಿಯಾದ ಔಷಧ ಕುಡಿದವನ ಹಾಗೆ ಮುಖವನ್ನು ಏಕೆ ಸಿಂಡರಿಸುತ್ತಿ? ನಿನಗೊಂದು ದುಃಖ ಬಂದಿದ್ದರೆ ಅದನ್ನು ನಮ್ಮಗಳ ಮುಂದೆ ಏಕೆ ಇರಿಸುತ್ತಿ? ನಮಗೇಕೆ ದುಃಖ ತರಿಸುತ್ತಿ? ಮುಖದಲ್ಲಿ ಸೋನೆ (ಜಿನುಗು ಮಳೆ) ಹಿಡಿದ ಹಾಗೆ ಗೋಳು ಏಕೆ ಸುಮ್ಮನೆ ಸುರಿಸುತ್ತಿ? ೨. ದುಃಖವನ್ನು ಹೊತ್ತುಕೊಂಡು ಬಂದವರು ನಾವು! ಹೊತ್ತುಕೊಂಡು ಹೋಗುವವರು ನಾವು! ಸಿಕ್ಕಿದವರ ಹತ್ತಿರ ಹೇಳಿಕೊಂಡಾಕ್ಷಣವೆ ಆರಿಹೋಗುತ್ತದೆಯೆ ಕಾವು? ಸಾಯುತ್ತದೇನು ಈ ಹಾವು? ಆರುವುದಿಲ್ಲ! ಸಾಯುವುದಿಲ್ಲ! ಆರಿಸಿ, ಸಾಯಿಸುವವರು ನಾವು! ೩. ನಮ್ಮ ನಮ್ಮ ದುಃಖ ನಮನಮಗೆಯೇ ಹೊರಲಾರದಷ್ಟಷ್ಟು ಇದೆ! ಜೊತೆಗೆ ನಿನ್ನದೂ ಇರಲೆಂದು ಎಂದರೂ ಅದರಿಂದ ಏನಾಗುತ್ತದೆ? ಏನು ಬಂದ ಹಾಗಾಗುತ್ತದೆ? ಅವರಿವರ ಹತ್ತಿರ ಅತ್ತರೆ ನಿನಗೆ ದುಃಖವೇನು ಕಡಿಮೆಯಾಗುತ್ತದೆ? ೪. ನಮ್ಮ ನಮ್ಮ ದುಃಖ ಸಿಕ್ಕಿದವರ ಹತ್ತಿರ ಮಾಡುತ್ತಾ ಇದ್ದರೆ ಮಹಜರ್ (ಪ್ರದರ್ಶನ), ಕೇಳುವವರು ಎದುರಿನಲ್ಲಿ ಇರುವವರೆಗೂ ದುಃಖವೇ ಗೈರುಹಾಜರ್ (ಮರೆ, absent)! ನಾವೇ ದೊರೆಗಳು! ರಾಜರು! ಕೇಳುವವರು ಏನಾದರೂ ಹಾಗೆ ಹೋಯಿತೆಂದರೆ, ತೆಗೆದುಕೊ! ದುಃಖ ಹಾಜರ್ (ಎದುರಿಗೆ ಬಂತು, present)! ೫. ದುಃಖ ಗೀಖ ಎಲ್ಲ ನೋಡು ನಮ್ಮ ನಮ್ಮ ಮನಸ್ಸು ಇದ್ದಹಾಗೆ! ಮನಸ್ಸಿನ ಲಗಾಮು (ಕುದುರೆಯನ್ನು ದಮನಮಾಡುವ ಹಗ್ಗ) ನಮ್ಮ ಕೈಯಲ್ಲಿದ್ದರೆ ಇಲ್ಲದಿದ್ದುದು ಇರುವ ಹಾಗೆ! ಇರುವುದು ಇಲ್ಲದಿದ್ದ ಹಾಗೆ! ಹೆಂಡ ಕುಡಿದವನ ಮಾತೆಂದು ಹೇಳಿ ನಗಬೇಡವೊ! ಏ ಪೆಂಗೆ (ಮೂರ್ಖ)! ೬. ದುಃಖ ಇದ್ದರೆ ಇತ್ತೆಂದು ಹೇಳು! ಸಂತೋಷವನ್ನು ಗಳಿಸು! ಮೋರೆ (ಮುಖ)ಯ ಮೇಲಿನ ಇಸ್ಟೇಜಿ (ರಂಗಸ್ಥಳ, stage)ನಿಂದ ದುಃಖಕ್ಕೆ ಕತ್ತು ಹಿಡಿದು ತಳ್ಳಿಸು! ನಗುವಿನ ಪರದೆ (ತೆರೆ) ಬೀಳಿಸು! ಹೀಗೆ ದುಃಖಕ್ಕೆ ದಫನ್ (ಸಮಾಧಿ) ಮಾಡಿ, ಅದಕ್ಕೆ ಕೊಸೆ (ಬೇರು, ಬುಡ) ಕೀಳಿಸು!

**೫೯. ಜಂಭ** ೧. ಸುಮ್ಮ ಸುಮ್ಮನೆಯೇ ನನಗೆ ಎನ್ನುತ್ತೀಯೆ — ಜಂಭದ ಕೋಳಿ ಎಂದು; ಮನುಷ್ಯನ ಮನಸ್ಸನ್ನು ನೋಡದೆ, ಸುಮ್ಮನೆ ಸಿಕ್ಕಿದ ಹಾಗೆ ಎಂದರೆ [ಪ್ರಯೋಜನ] ಬಂದಿತೆ! ೨. ತಿಳಿದವರು ಇತರರು ಹೊಗಳುವುದಕ್ಕೆಲ್ಲ ಕುಣಿದಾಡುತ್ತಾರೆಯೆ ಬಿದ್ದು? ತಿಳಿದವರ ಎಕ್ಕಡ (ಪಾದರಕ್ಷೆ) ಮಂಡೆ(ತಲೆ)ಯಲ್ಲಿ ಮಡಗಿ (ಇಟ್ಟು), ಕಲಿತಿದ್ದೇನೆ ಒಸಿ (ಸ್ವಲ್ಪ) ಬುದ್ಧಿ! ೩. ಕುಡಿಯುವವನು

ನಾನು! ಹಾಡುವವನು ನಾನೇ?—ಮೂಳೆ ಮಾಂಸದ ಕಂಬ! ಹೆಂಡ ಕುಳಿತು ಕೊಂಡು ಹಾಡಿಸುತ್ತಿದ್ದರೆ—ನನಗೆ ಏಕಣ್ಣ ಜಂಭ! ೪. ಸೂತ್ರದ ಬೊಂಬೆ ಇದ್ದ ಹಾಗಿದ್ದೇನೆ ಹೆಂಡದ ಕೈಯಲ್ಲಿ ನಾನು! ಹೇಗೆ ಹಾಡೆಂದರೆ ಹಾಗೆ ಹಾಡಬೇಕು! ನನಗೆ ಈ ಜಂಭದಿಂದೇನು! ೫. ಮೈಯ ತುಂಬ ತುಂಬಿಕೊಂಡಿದೆ ಹಾಡಿಸುವ ಹೆಂಡದ ಮತ್ತು (ಅಮಲು)! ಜಂಭ ಗಿಂಭ ಎನ್ನುವುದಕ್ಕೆಲ್ಲ ಜಾಗ (ಸ್ಥಳ) ಎಲ್ಲಿಂದ ಬಂತು! ೬. ಲೋಕಕ್ಕೆ, ಕುಳಿತುಕೊಂಡ ಹಾಗೆಯೇ ಕುಳಿತು, ಸಿಕ್ಕಿದ ಹಾಗೆ ಆಡುವುದಕ್ಕೆ ಗೊತ್ತು; ಕಣ್ಣು ಬಿಟ್ಟುಕೊಂಡು, ಹತ್ತಿರಕ್ಕೆ ಹೋಗಿ, ತಿಳಿಯುವ ಬುದ್ಧಿ ಎಲ್ಲಿ ಬಂತು? ೭. ಲೋಕದ ಚಾಳಿ (ನಡತೆ)ಯೇ ಹೀಗಿದೆ ಎಂದು ಕಂಡೇ ಇದೆ (ತಿಳಿದೇ ಇದೆ) ಅದು; ಆದರೂ ಏನೋ ಕುಡಿದವನ ಚಪಲ—ಹೇಳುವುದು ಹೇಳಿಬಿಡುವುದು! ೮. ಹೆಂಡ ಕುಡಿದವನ ಕಂತೆಯೆಂದು ಹೇಳಿ ಮೂಲೆಗೆ ಇದನ್ನು ಹಾಕಬಾರದು; ಮನುಷ್ಯನ ಜೀವ ತಿಳಿದುಕೊಳ್ಳದೆಯೇ ಸುಮ್ಮನೆ ನೋಯಿಸ ಬಾರದು!

**೬೦. ಹೆಂಗುಸರಿದ್ದಾರೆ ಹೂವಿದ್ದ ಹಾಗೆ** ೧. ಹೆಂಗುಸರಿದ್ದಾರೆ ಹೂವಿದ್ದ ಹಾಗೆ! ನಲುಗಿಸ (ಕಂದಿಸ)ಬಾರದು ಅವರನ್ನು! ಒಂದು ಚೋಟುದ್ದ ಹೂವೆಂದು ಅದನ್ನು ಒದ್ದವನು ಇಂದ್ರ ಉದ್ಧಾರವಾದನೆ! ಹೆಂಗುಸರು.........

**೬೧. ಚೆಂದ** ೧. ಹತ್ತ ಕಡಕು (ಕಿವಿಯ ಆಭರಣ) ಇಕ್ಕಿದ (ಇಟ್ಟ) ಹೆಂಗಸೆ! ಚೆಂದವುಳ್ಳವಳೆ ಹೆಂಗಸೆ! ಚೆಂದವಿದ್ದೇನೆಂದು ಮೆರೆಯಲೆಬಾರದು—ಬಿದ್ದೇ ಬೀಳುತ್ತದೆ ಹಲ್ಲು! ಅದಕ್ಕಿಂತ ಹೆಚ್ಚಿಗೆ ದಿವಸ ನಿಲ್ಲುತ್ತದೆ ಹತ್ತ ಕಡಕಿನದು ಕಲ್ಲು! ೨. ಹತ್ತು......! ಚೆಂದ......! ರೂಪ ಹೋಗುತ್ತದೆ! ಹತ್ತಕಡಕು ಹೋಗುತ್ತದೆ! ಆಮೇಲೆ ಬಹಳ ಪಜೀತಿ (ಅವಾಂತರ)! ಅವುಗಳಿಗಿಂತ ಹೆಚ್ಚಿಗೆ ದಿವಸ ನಿಲ್ಲುತ್ತದೆ ಹೆಂಡತಿ ಗಂಡರ ಪ್ರೀತಿ!

**೬೨. ಉಪದೇಶ** ೧. ಹೆಣ್ಣು ನಾಯಿಯ ಹಿಂದಿನ ಗಂಡು ನಾಯಿಯ ಹಾಗೆ ಸುತ್ತಬಾರದು ಸಂದಿ ಸಂದಿ! ಬೀದಿಯಲ್ಲಿ ಹೋಗುವ ಹೆಣ್ಣು ಹೆಂಗಸಿಗೆ ಕಣ್ಣುಹಾಕು ವವನು—ಹಂದಿ! ೨. ಕುಡಿಕನ ಕೈಯಲ್ಲಿ ಹೆಂಡ ಇದ್ದ ಹಾಗೆ ನಿನಗಿದ್ದಾಳೆ ಒಬ್ಬಳು ಹೆಂಡತಿ! ಇದ್ದದ್ದು ಬಿಟ್ಟು, ಇಲ್ಲದುದನ್ನು ಬೇಡಿ, ಸಿಕ್ಕಿದವಳ ಹಿಂದೆ ಏಕೆ ಓಡುತ್ತಿ? ೩. ಬೇರೆಯವಳನ್ನು ನೋಡಿದವರಿಗೆ ಇರುವ ನರಕ ತಿನ್ನಲಿ ಠಕ್ಕರ್ [ಮುರಿದು ಬೀಳಲಿ]! ಇಲ್ಲದವಳಿಗೆ ಅಲೆಯುವ ಸಂಭ್ರಮದಲ್ಲಿ ಇರುವವಳು ಕೊಟ್ಟಾಳು ಚಕ್ಕರ್ [ಬಿಟ್ಟು ಬೇರೆ ಹೋದಾಳು]!

**೬೩. ವಿಷ್ಣು ಪಡಚ** [ಧ್ವಂಸ] ೧. ಪದವಿ ನೋಡಿಕೊಂಡು, 'ದೊಡ್ಡವನು' ಎನ್ನುವುದು ಲೋಕಕ್ಕೆ ಒಂದು ಹಾಳು ರೋಗ! ಇದನ್ನು ಕಾಣಬಹುದು—ಎಲ್ಲರೂ ವಿಷ್ಣುವನ್ನು ಹೊಗಳುವುದರಲ್ಲಿ! ೨. ಏನು ವಿಷ್ಣುವೊ! ಬೆಪ್ಪಿನ ಹಾಗೆ ಬಿದ್ದಿದ್ದಾನೆ ಹಾಲಿನ ಸಮುದ್ರದ ಮಧ್ಯೆ! ಹಾಲಿನಲ್ಲಿ ಬೆರಳುಹಾಕಿ ಚೀಪುತ್ತಾ ಇರುವುದಕ್ಕೆ ಹಸು ಮಗುವೆ—ಶುದ್ಧ! ೩. [ತಲೆಯ] ಬುರುಡೆಯಲ್ಲಿ ಅವನಿಗೆ ಒಂದು ಇಂಕ್ರ (ಸ್ವಲ್ಪ) ವಾದರೂ ಬುದ್ಧಿಗಿದ್ಧಿ ಇದ್ದರೆ! ಯೋಚನೆ ಬೇಡವೆ—ಯಾವಾಗಲಾದರೂ ಹಾಲು ಒಡೆದು ಹುಳು ಬಿದ್ದರೆ! ೪. ವಿಷ್ಣು ಎಂದು ಎಂದರೆ—ಬ್ರಹ್ಮನಿಗೆ ಅಪ್ಪ! ಹೆಚ್ಚಿಗೆ ಹೇಳುವುದು ಏಕೆ? ಮಗನೇ ಮೊದ್ದಿನ ಮುದ್ದೆ ಆದರೆ—ಅಪ್ಪ [ಇನ್ನು] ಹೇಗಿರಬೇಕು! ೫. ನಾನು ಏನಾದರೂ ವಿಷ್ಣುವಾಗಿದ್ದರೆ—ಗೊತ್ತೇ ಏನು ಮಾಡುತ್ತಿದ್ದೆ [ಎಂದು]? ಹೆಂಡದ ಸಮುದ್ರದ ಮಧ್ಯಕ್ಕೆ ಹೋಗಿ ಝಾಂಡ ಹಾಕಿ (ಬಾವುಟಹಾಕಿ—ಬೇರೂರಿ) ಬಿಡುತ್ತಿದ್ದೆ! ೬. ಶೇಷನ ಸಾವಿರ ತಲೆಗಳನ್ನೂ ಸಾಲ ಈಸ್ಕೊಂಡು (ತೆಗೆದುಕೊಂಡು) ಬಿಟ್ಟು, ಸಮುದ್ರಕ್ಕೆ ಬಾಯಿಟ್ಟು ಹೀರಿದ ಎಂದೆಂದರೆ—ಸಮುದ್ರಕ್ಕೆ ಸಮುದ್ರವೇ ಛಟ್ಟು (ನಾಶ)! ೭. ದೊಡ್ಡದು ಒಂದು ಸಮುದ್ರ ಖಾಲಿ (ಬರಿದು) ಆದರೆ, ಇನ್ನೂ ಇವೆ ಆರು! ಹಾಲು! ತುಪ್ಪ! ಮೊಸರು! ಎಣ್ಣೆ! ಕಬ್ಬಿನ ಹಾಲು! ನೀರು! ೮. ಮಿಕ್ಕಿದ್ದ (ಉಳಿದ) ಆರನ್ನೂ ಮುಂದೆ ಇಟ್ಟುಕೊಂಡು, 'ಛೂ ಮಂತ್ರ' ಎಂದರಾಯಿತು! ವಿಷ್ಣು ಆದವನ ಶಕ್ತಿ ಎಂದೆಂದರೆ—ಎಲ್ಲಾ ಹೆಂಡವಾಗಿಹೋಯಿತು! ೯. ಬುದ್ಧಿ ಇದ್ದವರಿಗೆ ಎಲ್ಲಿದೆ ಶಕ್ತಿ? ಏನು ಹೇಳಿಕೊಂಡು ಏನು ಬಂತು! ಶಕ್ತಿ ಇದ್ದವರಿಗೆ ಬುದ್ಧಿ ಇಲ್ಲದಿದ್ದರೆ ಅದೂ ಒಂದು ಗತ್ತು (ಠೀವಿ)! ೧೦. ದೊಡ್ಡವನು ವಿಷ್ಣು—ಕಲಿತುಕೊಳ್ಳಬಾರದೆ—ಚಿಕ್ಕವನು ಕುಡಿಕನನ್ನು ಸೇರಿ! ಛೆ! ಛೆ! ಛೆ! ಛೆ! ಎಲ್ಲಿಯಾದರೂ ಉಂಟೆ! ಹಾಲಿನಲ್ಲಿಯೇ ಅವನ ಗೋರಿ (ಸಮಾಧಿ)!

**೬೪. ದೇವರು** ೧. ಮುಚ್ಚು ನಿನ್ನ ಬಾಯಿ! ಏ ಬೇವಾರ್ಸಿ! ಭಗವಂತನ ಹೆಸರು ನಮಗೆ ತಾರಸಿ (ಮಾಡು, ಸೂರು, ಎಂದರೆ ಆಶ್ರಯ, ರಕ್ಷೆ)! ಇಲ್ಲದ್ದನ್ನೆಲ್ಲ ಹುಟ್ಟಿಸಿಕೊಂಡು ಏಕೆ ಸುಮ್ಮನೆ ಕೂಗುತ್ತಿ ಖಾಲಿ (ವ್ಯರ್ಥವಾಗಿ)? ನಮಗೆ ದೇವರು ಹೇಗಿದ್ದಾನೆಂದರೆ—ಮುತ್ತೈದೆಗೆ ತಾಲಿ (ಮಾಂಗಲ್ಯ) [ಇದ್ದಹಾಗೆ]! ೨. ದೇವರು ಇಲ್ಲವೆಂದು ಹೇಳಿದರೆ ನೀನು, ದೇವರು ಇದ್ದಾನೆಂದು ಹೇಳುತ್ತೇನೆ ನಾನು. ಮಡಿಕೆಯಲ್ಲಿ ತುಂಬಿದ ಹೆಂಡ ತನಗೆ ಸಿಕ್ಕದೆಹೋದರೆ, ಸೋತು, ಪ್ರಪಂಚದಲ್ಲಿಯೆ ಹೆಂಡವಿಲ್ಲವೆಂದರೆ, ಅದೆಯೆ ಸಾಜ (ಸಹಜ) ಮಾತು! ೩. ನನಗೇನೂ ಬೇಡ ನಿನ್ನ ಬುದ್ಧಿವಾದ! ನನಗೂ ನಿನಗೂ ಬಹಳ ಭೇದ! ನಮ್ಮ ತಾಪತ್ರಯವನ್ನು ಮುಳುಗಿ

ಸುತ್ತದೆ ಭಗವಂತನ ಹೆಸರಿನ ಶಕ್ತಿ! ಅದಕ್ಕೇ ನಮಗೆ ಭಗವಂತನ ಹೆಸರು ಎಂದರೆ ಆಪಾಟಿ (ಅಷ್ಟೊಂದು) ಭಕ್ತಿ! ೪. ದೇವರು ಇದ್ದಾನಂತೆ! ದೇವರು ಇಲ್ಲವಂತೆ! ಹೇಳುವವರು ಹೇಳಲಿ—ಅದಕ್ಕೇನಂತೆ? ದೇವರು ಇದ್ದಾನೆ ಎಂದು ನಂಬಿಕೊಳ್ಳುವುದು ನಮಗೆ ಜೀವ—ಉಸಿರು! ಅವನಲ್ಲಿ ನಂಬಿಕೆ ಮಡಗಿ (ಇಟ್ಟು)ಕೊಳ್ಳುವುದು ನಮಗೆ ನಮ್ಮದೇ [ಆದ] ನಸರು (ಕಾಣಿಕೆ)!

**೬೫. ವಿಶ್ವಾಮಿತ್ರ ರತ್ನ** ೧. ಲೋಕ ಸುಮ್ಮನೆ ಕೆಟ್ಟುಹೋಗಿದೆ ಪೂರ! ತುಂಬ! ಬಹಳ! ಭೂತಗಳು ಹಿಗ್ಗುತ್ತ ಕುಣಿದರೆ—ಅದೊ! ದೆವ್ವಗಳು ಹಾಕುವ ತಾಳ! ೨. ದುಡ್ಡಿಗೆ ಕಚ್ಚು (ಆಸೆ), ಹೊಟ್ಟೆಯು ಕಿಚ್ಚು—ಏನು ಹೇಗೆ ಹೆಚ್ಚಿಕೊಂಡಿದೆ! ಸುಖ, ಶಾಂತಿ, ತೃಪ್ತಿ, ಎಲ್ಲಕ್ಕೂ ಬಾಗಿಲು ಮುಚ್ಚಿಕೊಂಡಿದೆ! ೩. ವೈಕುಂಠದ ಅಪ್ಪನ ಹಾಗೆ ಇದ್ದ ನಮ್ಮ ದೇಶ—ಈಗ ಹೇಗಿದೆ ನೋಡು! ಕಟುಕರ ಕೋಣೆ! ನರಕಕ್ಕೆ ಅಪ್ಪ! ಬದುಕಿರುವವರ ಸುಡುಗಾಡು! ೪. ಮುನ್ನೂರು ಮೂವತ್ತು ಕೋಟಿ ದೇವರೂ ಸುಮ್ಮನೆ ಕುಳಿತುಕೊಂಡಿದ್ದಾರೆ! ನರಳುವವರ ಗೋಳಿಗೆ ಕಿವಿ ಮುಚ್ಚಿಕೊಂಡು ಸತ್ತಹಾಗೆ ಬಿದ್ದುಕೊಂಡಿದ್ದಾರೆ! ೫. ದೇವರು ಎಂದೆನ್ನುವ ದೊಡ್ಡ ಹೆಸರು ಬೇಕು—ಪದವಿ, ಸಂಬಳ ಬೇಕು; ಕಟ್ಟಿಕೊಂಡ ಕೆಲಸ ಮಾಡದಿದ್ದರೂ—ಆಹ! ಏನು ನಿಮ್ಮ ಜೋಕು! ೬. ದೇವರು ಗೀವರು ಎಂದು ಕೊಂಡಿದ್ದರೆ ನಮಗೆ ಈಗ ಉದ್ಧಾರವಿಲ್ಲ! ದೇವರಿಗೆ ದೇವರೆ! ನಮಗೆ ನಾವೆ! ಬೆಳೆದವರ ಪಾಲಿಗೆ ಬೆಲ್ಲ! ೭. ಬದುಕಬೇಕೆಂದರೆ—ಈ ಲೋಕದಿಂದ ಬಚಾವಾಗಬೇಕು (ತಪ್ಪಿಸಿಕೊಳ್ಳಬೇಕು) ತುರ್ತು (ಬೇಗ); ನಮ್ಮದೇ ಲೋಕ ಹುಟ್ಟಿಸಿಕೊಳ್ಳಬೇಕು—ಈ ಲೋಕವನ್ನೇ ಮರೆತು! ೮. 'ಇನ್ನೊಬ್ಬ ಇಂದ್ರನನ್ನು ಕರೆಸುತ್ತೇನೆ' ಎಂದ ಹಾಗೆ ವಿಶ್ವಾಮಿತ್ರ—'ನನ್ನದೇ ಲೋಕ ಕಟ್ಟಿಕೊಳ್ಳುತ್ತೇನೆ' ಎನ್ನುವುದು ರತ್ನನ ಹತ್ತಿರ!

**೬೬. ಕರ್ಮ** ೧. ಕೈಯಲ್ಲಿ ಕಿಸಿಯದೆ (ಹರಿಯದೆ, ಸಾಗದೆ) 'ಕರ್ಮ' ಎಂದು ಕಿರಲು(ಕೂಗು)ವ ಕಂಜೋರ್ ಆದ್ಮಿ (ಹೀನಶಕ್ತಿಯವನೆ)! ಬಕ್ರ (ಕುರಿ)! ಕೈಯಲ್ಲಾಗುವವರನ್ನೂ ಕೆಳಕ್ಕೆ ಎಳೆಯುವವನು, ನೀನು ಎಲ್ಲಿ ಹುಟ್ಟಿದೆಯೊ, ವಕ್ರ! ೨. ಕರ್ಮ ಎಂದು ಎಂದರೆ—ಹಿಂದೆ ನಾವು ಹಾಕಿದ ಬೀಜದ ಹೂವು ಹಣ್ಣು ಅಲ್ಲ! ಕರ್ಮ ಎಂದು ಎಂದರೆ—ಈಗ, ನಾವು ಸಿಕ್ಕಿದವನ ಮುಷ್ಟಿಗೆ ತೋರಿಸುವ ಗಲ್ಲ! ೩. ಕರ್ಮಕ್ಕೆ ಕೈಮುಗಿದು [ಶರಣಾಗಿ], 'ಜೈ' ಎಂದವನಿಗೆ ಅಬ್ಬಿ ನ್ಯೈ ನ್ಯೈ ದೇಖಾ (ನಾನು ಇನ್ನೂ ಕಂಡಿಲ್ಲ)! 'ಮಡಗಿಸಿ(ಹೊಡೆಸಿ)ಕೊಳ್ಳುವವನ ತಲೆ ಮೇಲೆ ಇನ್ನಷ್ಟು ಮಡಗೋ (ಹೊಡಿಯೋ)' ಎನ್ನುತ್ತದೆ ಲೋಕ! ೪. ನೀನೆಂದೆನ್ನುವ

ನಾಮರ್ದ(ನಪುಂಸಕ)ನಿಗೆ 'ನಿನ್ನ ಅಪ್ಪ' ಎಂದು ಎನಬೇಕು! ತುಳಿಯುವುದಕ್ಕೆ ಬಂದವನನ್ನು ತಿರುಗಿಸಿ ಹಾಗೆ ಎಸೆದು, ಕರ್ಮಕ್ಕೆ ಬೆಂಕಿಹಾಕಬೇಕು!

**೬೭. ರತ್ನನ ಮಾತು** ೧. ನಿನ್ನ ಕೈಕೆಳಗಿನವನು ನಾನು ಎಂದಾಕ್ಷಣವೆ, 'ಲೋ' ಎಂದು ಹೇಳಿ ಎನ್ನಬೇಕೆ? 'ಅಪ್ಪ, ಅಣ್ಣ' ಎನ್ನುವುದು ಬಿಟ್ಟು, ದೊಡ್ಡಗಿಡ್ಡತನ ಮೂಲೆಯಲ್ಲಿಟ್ಟು, ತಿಳಿದವನೇ ಹೀಗೆಂದು ಎಂದರೆ, ಮೆಚ್ಚಿಕೊಳ್ಳುತ್ತದೆಯೆ ಲೋಕ? ೨. ಮೂರನೆಯವನಿಗೆ ಚಿಕ್ಕವನು ಮಾಡಿ, ದೊಡ್ಡಮನುಷ್ಯನಾದೆನೆಂದು ತಿಳಿದು, ಮೋಸಹೋಗಬೇಡ. ಚಿಕ್ಕದು ಡೊಡ್ಡದು ಎಲ್ಲಾ ಹೋಗುವುದು—ನಸೀಬು ಹಿಡಿದು (ಅದೃಷ್ಟ ಅನುಸರಿಸಿ)! ಆರು ಕಾಸು ರೂಪಾಯಾಗಿಹೋಗುತ್ತದೆಯೆ, ಕೊಟ್ಟರೆ ಸುಣ್ಣ ಬಳಿದು? ೩. ನಸೀಬು ಒಂದು ಬಸಿಯುತ್ತಾ ಇದ್ದರೆ ಮನುಷ್ಯ ದೇವರಾಗುತ್ತಾನೆ! ಕಂಡಿದ್ದ ನಸೀಬು ಏನಾದರೂ ಖೋಟ (ಅಸಹಜ—Counterfeit) ಆದರೆ, ಎಲ್ಲರ ಬೆನ್ನೂ ಗೂನೆ! ೪. ತಾಬೇದಾರಿ (ಪಾರತಂತ್ರ್ಯ) ಒಂದು ಸುಡುಗಾಡು! ಮನುಷ್ಯನನ್ನು ಮಣ್ಣುಮಾಡುತ್ತದೆ! ತಾಬೇದಾರರು (ಪರತಂತ್ರರು) ಮೇಲಿನವರೆದುರು ಹೀಗೆನ್ನಬಾರದು, ಗೊತ್ತು. ಆದರೂ ನರಮನುಷ್ಯ ಎನ್ನುವವನು ಸಹಿಸುವುದಕ್ಕೂ ಮಿತಿ ಅಳತೆ ಇದೆ! ೫. ದೊಡ್ಡವನು ನೀನು, ಚಿಕ್ಕವನು ನಾನು, ಇದ್ದರೂ ಇರಬಹುದು—ಹೇಳಿಕೊ; ಆದರೂ ಕೂಡ ಚಿಕ್ಕವನು ನೀನು ಎಂದು ಹೇಳಿ ಎನ್ನುತ್ತ ಮೂರು ಹೊತ್ತೂ ಮೊಟಕು(ತಲೆಯಮೇಲೆ ಹೊಡೆ)ವುದು ಮಾತ್ರ ದೊಡ್ಡತನವಲ್ಲ—ಅನ್ನುವುದು ಚೆನ್ನಾಗಿ ತಿಳಿದುಕೊ! ೬. ತಿಳಿದವರಿಗೆ ಹೀಗೆಂದು ಹೇಳುವುದಕ್ಕೆ ನಾನೇ! ಕುಡಿಕ! ಹಳ್ಳಿಯ ಮೂರ್ಖ! ನನಗೇನೂ ಅಂತಹ ಜಂಭವಿಲ್ಲ. ಆದರೂ ನನಗಿರುವುದೆಲ್ಲ—ತಿಳಿದವರಿಗೂ ಮಂಕು ಮುಚ್ಚಿಕೊಂಡಿತೆ ಎನ್ನುವುದು ಒಂದೇ ದುಃಖ!

**೬೮. ಮಂಗಳಾರತಿ** ೧. ಬದುಕಿದ್ದರೆ ಇರಬೇಕು ರುಸ್ತುಮನ ಹಾಗೆ! ಇಲ್ಲದಿದ್ದರೆ ಎನ್ನಬೇಕು: 'ಬಂದೇ ಗಂಗೆ!' ಸತ್ತಹಾಗೆ ಬದುಕಿರಬಾರದು! ಬಟ್ಟೆ ಬೇಕೆಂದರೆ ಇಲ್ಲವೆನಬೇಕು! ಕೊಟ್ಟರೆ ಮೈಗೆ ಒಪ್ಪಿದ ಹಾಗಿರಬೇಕು! ಚಿಂದಿ (ಹರಕು) ಕೊಡಬಾರದು ಹರಿದು!

**೬೯. ಜೋಗಿನ ಜಲಪಾತ** ೧. ಅದೊ! ಅದೊ! ಅದೊ! ರಾಜಾ! ರೋರರ್! ರಾಕೆಟ್! ಆಮೇಲೆ ಲೇಡಿ! ಜೋಗಿನ ಜಲಪಾತ ಎಂದು ಎನ್ನುತ್ತಾರೆ ಇವುಗಳು ನಾಲ್ಕಕ್ಕೆ ಕೂಡಿ! ೨. ನಷ್ಟಕ್ಕೆ ಸಿಕ್ಕಿ ನರಳುವವನಿಗೇ ಮೇಲಿಂದ ಮೇಲೆ ಕಷ್ಟ ಒದ್ದುಕೊಂಡು ಬಂದು ಬಡಿದಿಕ್ಕು(ಬಡಿದು ಹಾಕು)ವುದನ್ನು ಮಾಡುತ್ತದೆ ರಾಜಸ್ಪಷ್ಟ! ೩. ದುಡ್ಡುಳ್ಳವರು ದುಡ್ಡಿಲ್ಲದವರನ್ನು ಗದರಿಸಿ ಓಡಿಸುವ ಹಾಗೆ,

ರೋೞರಿನ ಸದ್ದು ನೆನಪು ತರುತ್ತದೆ, ಕೇಳುತ್ತ ನಿಂತರೆ ನನಗೆ! ೪. ಬಡವನನ್ನು ಮುಕ್ಕುವ ಸಾವಿರ ಸಂಕಟ ಜಾಗ (ಸ್ಥಳ) ಸಾಲದೆ ಒಳಗೆ, [ಹೊರಕ್ಕೆ] ಉಕ್ಕಿಬರುವ ಹಾಗೆ ಎದ್ದು ಬರುತ್ತದೆ, ರಾಕೆಟ್ಟು ಉರುಳಿ ಕೆಳಗೆ! ೫. ಜಾರುತ್ತ, ಲೇಡಿ, ತೇಲುತ್ತ ಬಂದರೆ, ಮ್ಯೆ ಝುಂ ಝುಂ ಎನ್ನುತ್ತದೆ! ಬಡವನನ್ನು ತಿನ್ನುವ ಶ್ರೀಮಂತಮ್ಮ ಬಳುಕುತ್ತ ಬಂದಹಾಗೆ ಇದೆ! ೬. ಬಡವನ ಬಾಯಿಗೆ ಬೀಗವಿಕ್ಕಿ [ಬಾಯಿಮುಚ್ಚಿ] ಬಣ್ಣ ಮೇಲೆ ಬಳಿದ ಹಾಗೆ, ಜಲಪಾತದ ಮೇಲೆ ಏನು ಕಾಮನ ಬಿಲ್ಲು! ಆಹ! ಬಿಲ್ಲಿನ ರಂಗೆ (ಬಣ್ಣವೆ)! ೭. ಬಡವನ ಬದುಕು ಎದ್ದುಬಂದ ಹಾಗೆ ಜೋಗು ಕಾಣಿಸುತ್ತಿದ್ದರೆ ಕಣ್ಣಿಗೆ, ಸುತ್ತಿನ ಕಾಡೂ ಕಾಮನಬಿಲ್ಲೂ ನಗುತ್ತಿರುತ್ತವೆ ತಣ್ಣಗೆ! ೮. ಮಿಕ್ಕವರ ಕಷ್ಟ ಕಟ್ಟಿಕೊಂಡೇನು? ಅವರವರ ಸುಖ ಅವರವರಿಗೆ! ಪಾನಕ ಕುಡಿಯುವವರು ಕುಡಿದು ಅನುಭವಿಸಲಿ! ಹೊರುವವರು ಹೊರುತ್ತಾರೆ ಚೌರಿಗೆ (ನೀರುವ ತರುವ ಕೊಡ, ಬಿಂದಿಗೆ)!

**೭೦. ಕೊಳದಲ್ಲಿ ತೇಲುತ್ತಿದ್ದ ಬೆಂಡು** ೧. ಭೂಮಿಗೆ ಗೋಂದುಹಾಕಿ ಅಂಟಿಸಿದ ಹಾಗೆ, ಅಕಡೆ ಈಕಡೆ ಅಳ್ಳಾಡದ ಹಾಗೆ, ಕೊಳದಲ್ಲಿ ನಿಂತಿತ್ತು ನೀರು! ಗಂಡನ ತುಟಿಗೆ ಹೆಂಡತಿಯ ಮುತ್ತು ಕುಳಿತ ಹಾಗೆ, ಕೊಳದಲ್ಲಿ ಕುಳಿತುಕೊಂಡಿತ್ತು —ಒಂದು ಚಿಕ್ಕ ಬೆಂಡಿನ ಚೂರು. ೨. ಪಡಕಾನೆಗೆ, ತೆಗೆದ ಗೇಟಿ(gate)ನಿಂದ ಕುಡಿಕರು ನುಗ್ಗಿದ ಹಾಗೆ, ಆ ಕಡೆಯಿಂದ ಕೊಳಕ್ಕೆ ಒಂದು ಹೊಳೆ ನುಗ್ಗಿತು! ತನ್ನ ಪಾಡು ತನಗೆಂದು ಕುಳಿತಿದ್ದ ಬೆಂಡು, ನುಗ್ಗಿದ ನೀರಿಗೆ ಕೈಮುಗಿದುಕೊಂಡು, ಅದರ [ಹೊಳೆಯ] ದಾರಿಗೇ ಬಗ್ಗಿತು. ೩. ಸಮಯಕ್ಕೆ ಧುಮುಕಿದ ಸಾಲಗಾರರ ಹಾಗೆ, ಹತ್ತೂ ದಿಕ್ಕಿನಿಂದ ದೆವ್ವಗಳ ಹಾಗೆ, ಕೊಳಕ್ಕೆ ನೀರು ನುಗ್ಗಿಹೋಯಿತು! ತೇಲುತ್ತಿದ್ದ ಬೆಂಡು, ಕೊಳದೊಳಗೆ ಗಿರ್ರೆಂದು ತಿರುಗುವ ಹಾಳು ಸುಳಿಗೆ ಸಿಕ್ಕಿಕೊಂಡು, ಪಡಚ[ನಾಶ] ಆಗಿಹೋಯಿತು. ೪. ಅದನ್ನು ಕಂಡವರೆಲ್ಲರೂ ಬೆರೆತು (ಬೆರಗಾಗಿ), 'ಅಯ್ಯೋ ಪಾಪ!' ಎಂದರೆ ಹೊರತು, ಮುಳುಗುವುದು ತಪ್ಪಿಸಲಿಲ್ಲ! ಕೊಳಕ್ಕೊಂದು ಚಿಕ್ಕದಾಗಿ ಕಟ್ಟೆ ಕಟ್ಟಿ, ಬೆಂಡನ್ನು ಬದುಕಿಸುವುದಕ್ಕೆ ನೀರು ತಡೆದಿಟ್ಟು, ಉಳಿಸಬಹುದಾಗಿತ್ತಲ್ಲ!

**೭೧. ದೊಡ್ಡವನ ಹೆಸರು** ೧. ನಮ್ಮ ಊರಿನಲ್ಲಿ ಒಂದು ದೊಡ್ಡ ಕಟ್ಟೆಯಿದೆ —ಲಕ್ಷ್ಮಪ್ಪನ ಕಟ್ಟೆ ಎಂದು; ಹಾಗೆಯೇ ನೋಡುತ್ತೇನೆ—'ನಮ್ಮೂರ ಕಟ್ಟೆಗೆ ಈ ಹೆಸರು ಏಕೆ ಬಂತು?' ಎಂದು! ೨. ಲಕ್ಷ್ಮಪ್ಪ ಏನೋ ಲಕ್ಷಾಧಿಕಾರಿ! ಕಟ್ಟೆಗೆ ಅವನದೇನು ಹಂಗು? ಪೈಸ (ಹಣ) ಕೊಟ್ಟವರು ಪ್ರಜೆಗಳು ನಾವು! ಅದೇ ಅನುಮಾನ ನನಗೂ! ೩. ಇಂಜಿನಿಯರು (Engineer) ಸಾಹೇಬರು ಉಸ್ತುವಾರಿ

(ಮೇಲುವಿಚಾರಣೆ)ಗೆ; ಕೆಲಸಕ್ಕೆ ಮೇಸ್ತ್ರಿ (ಮೇಲುವಿಚಾರಕ), ಗ್ಯಾಂಗು (ಕೂಲಿಗಳ ತಂಡ); ಹೆಸರು ತೆಗೆದುಕೊಳ್ಳುವುದಕ್ಕೆ ಮಾತ್ರ ಲಕ್ಷ್ಯ! ಫೌಲು (foul—ಅನ್ಯಾಯ) ಮಾಡಿ ಕೊಟ್ಟ ಟಾಂಗು (ತೊಡರುಗಾಲು)! ೪. ಹೀಗೆಯೇ—ಸಾಹುಕಾರ ರಂಗಯ್ಯನ ಹೆಸರಿಗೆ—ನಮ್ಮೂರ ಬೀದಿ ಬಿಡದಿ (ಬಿಡಾರ)! ರಸ್ತೆಯನ್ನು ಅವನೇನು ತೋಟಿ (ಜಲಗಾರ) ತಿಮ್ಮನ ಹಾಗೆ ಗುಡಿಸುತ್ತಾನೆಯೆ ಪೊರಕೆ ಹಿಡಿದು? ೫. ಹಾಗೆಯೇ ಸುಮ್ಮನೆ ನೋಡುತ್ತಿದ್ದೇನೆ—ನಾನೂ ಹುಟ್ಟಿದಾಗಿನಿಂದ—ಚಿಕ್ಕವರು ಕಷ್ಟಬಿದ್ದು ಬೆಳೆಸಿದುದನ್ನು ನುಂಗುವುದಕ್ಕೆ ದೊಡ್ಡವನು 'ಸಿದ್ಧ' ಎಂದ! ೬. ದೊಡ್ಡವನ ಹೊಟ್ಟೆ ಬಹಳ ದೊಡ್ಡದಣ್ಣ! ಕಂಡಿದ್ದು ಗುಳುಂ! ಸ್ವಾಹ! ತಿಂದು ತೇಗುತ್ತ ಕುಡಿಯುತ್ತಿದ್ದಷ್ಟೂ ಏರುತ್ತದೆ ಹಸಿವು, ದಾಹ! ೭. ಲಕ್ಷ ಚಿಕ್ಕವರು ಮಾಡಿದ ಕೆಲಸ—ದೊಡ್ಡವನು ಒಬ್ಬನಿಗೆ ಹೆಸರು! ಇಂತಹ ದೊಡ್ಡವರ ದೊಡ್ಡ ಹೆಸರೆಂದರೆ—ಲಗ್ನವಾಗದೆಯೆ ಬಸಿರು!

**೭೨. ನಾಜೋಕು (ನಾಗರಿಕತೆ)** ೧. ಜೀತ(ದುಡಿತ)ದ ಜೀವದ ಕುಲುಮೆಯಲ್ಲಿ, ಬದುಕುವ ಆಸೆಯ ಕಲ್ಲಮೇಲೆ, ಬೆವರಿನ ರೂಪಾಯಿ, ರಕ್ತದ ಮೊಹರ (ಚಿನ್ನದ ನಾಣ್ಯ), ಠಣಗುಡುತ್ತ ಏಳುತ್ತದೆ ನೋಡಲ್ಲಿ! ನೇರ—! ಮುರುಕಲು ಜೋಪಡಿ (ಗರಿಯ ಗುಡಿಸಲು) ಟಂಕಸಾಲೆ! ಬತ್ತಿಕೊಂಡ ಹೊಟ್ಟೆ (ಬಡವ) ಅಕ್ಕಸಾಲೆ! ೨. ಬದುಕುವುದಕ್ಕೆ ಬಿಡುಕಾಸು ಪಡೆಯುವುದಕ್ಕೆ, ಲಕ್ಷಾಂತರ ರೂಪಾಯಿ ಮಡಿದುಹಾಕಿ, ಮಂಡೆ(ತಲೆ)ಯಲ್ಲಿ ಮಡಗಿ (ಇಟ್ಟು) ಸಿಕ್ಕಿದವರ ಜೋಡು (ಪಾದರಕ್ಷೆ), ಮುಂಕುಹಿಡಿದ ಹಾಗೆ ದುಡಿಯುತ್ತದೆ, ನೋಡು—ಹುತ್ತ ಕಟ್ಟುವ ಗೆದ್ದಲು ಹುಳು! ಜೇನು ಕೂಡಿಹಾಕುವ ಜೇನುಹುಳು! ೩. ಸಿಗಿಯುವುದಕ್ಕೆ ಒಳ್ಳೇ ಮೋಪಾಗಿ (ಹಿಡಿತಕ್ಕೆ ಸರಿಯಾಗಿ), ಆನೆಗೆ ಬಾಳೆತೋಪಾಗಿ, ಬತ್ತಿಕೊಂಡ ಹೊಟ್ಟೆ (ಬಡವ) ಸಿಕ್ಕಿದೆಯೆಂದು ಬಗಿಯುವ ಡೊಳ್ಳ(ಧನಿಕ)ನ್ನು ನೋಡಿದೆಯಾ ಮತ್ತೆ—ಹುತ್ತ ಹತ್ತುವ ಹೆಬ್ಬಾವನ್ನು! ಜೇನು ಕದ್ದು ಜನ್ಮ ದಬ್ಬು(ಕಳೆ)ವವನನ್ನು! ೪. ಹಳ್ಳ ಕೆಳಕೆಳಕ್ಕೆ ಒತ್ತಿಕೊಳ್ಳುತ್ತದೆ! ಬೆಟ್ಟ ಬೆಟ್ಟವನ್ನು ಎತ್ತಿಕೊಳ್ಳುತ್ತದೆ! 'ಬದುಕುವುದು ಸಾಲದು, ಬದುಕಿಸಬೇಕು' ಎಂದು ಹಾಗಿದ್ದರೆ—ಅದು ನಾಜೋಕು (ನಾಗರಿಕತೆ)! ನಾಜೋಕಿನ ಈ ಕಾಲದಲ್ಲಿ—ನೀರೇ ಇಲ್ಲ, ಬರಿಯ ನಲ್ಲಿ!

**೭೩. ಬಡವನ ದೇವರು** ೧. ಸಾವಿರ ಜನಕ್ಕೆ ಸಾವಿರ ದೇವರು! ಬಡವನ ದೇವರು ಹೊಟ್ಟೆ! ದುಡ್ಡಿನ ಡಬ್ಬಿ! ಹೇಳುವುದು ಕೇಳು! ಸತ್ಯಕ್ಕೆ ನಾನು ಬಾಯಿ ಕೊಟ್ಟೆ! ೨. ತಿನ್ನದ ಕಲ್ಲಿನ ದೇವರ ಮುಂದೆ ತಿಂಡಿ ತುಂಬಿದ ತಟ್ಟೆ! ಖಾಲಿ (ಬರಿದು) ತಿಂದು, ಖಾಲಿ ತಿಂದು, ಕೆರಳಿ, ಉರುಳಿದೆ ಹೊಟ್ಟೆ! ೩. ಬಡವನ

ದೇವರನ್ನು ಕೆರಳಿಸಬಾರದು—ಲೋಕಕ್ಕೆ ಒಳ್ಳೆಯದಲ್ಲ! ಬಡವನ ದೇವರಿಗೆ ನರಳಿಸುತ್ತಿದ್ದರೆ—ಲೋಕಕ್ಕೆ ಬೆಳಕೇ ಇಲ್ಲ! ೪. ನೀನು ಮುಗಿದು ಪೂಜೆಮಾಡುವ ದೇವರು ಮುನ್ನೂರ ಮುವ್ವತ್ತು ಕೋಟಿ ಇದ್ದರೂ, ಬಡವನ ದೇವರಿಗೂ ತೋರಿಸು ಆ ಪೈಪೋಟಿ (ಸ್ಪರ್ಧೆ) [ಪೂಜೆಯಲ್ಲಿ]! ೫. ತಿನ್ನಲೂ ಆರವು, ದುಡಿಯಲೂ ಆರವು, ಕಲ್ಲಿನ ದೇವರ ಗುಂಪು! ಬಡವನ ದೇವರಿಗೆ ನೀನು ಇಕ್ಕಿ(ನೀಡಿ)ದರೆ, ನಿನಗೆ ಬಹಳ ತಂಪು! ೬. ನಮ್ಮ ದೇವರಿಗೆ ಬೋನ (ಉಣಿಸು) ನೀಡು—ಧರ್ಮ ಬರುತ್ತದೆ ನಿನಗೆ; ದುಡ್ಡಿನ ಡಬ್ಬಿ ಕರಗೀತೆಂದು ಸುಮ್ಮನೆ ಕುಳಿತರೆ ಹೇಗೆ? ೭. ಅಜ್ಞಾನಿಗೆ ಮೆಲ್ಲಗೆ ಹೇಳುತ್ತಾರೆ ಎಂಟು ಹತ್ತು ಸಾರಿ (ಸಲ) ಬುದ್ಧಿ; ಕೇಳದೇ ಹೋದರೆ ಗೊತ್ತಿದೆಯಲ್ಲ—ಹಿಡಿದುಕೊಂಡು ಮಾಡಿಸುವುದು ಒದ್ದು! ೮. ಬಡವನ ದೇವರನ್ನು ಕೆಣಕಲೇಬಾರದು—ನೀನು ಕಂಡಿಲ್ಲ ಅದರ ಏಟನ್ನು! ಬಡವರ ದೇವರು ಲೋಕವನ್ನು ನುಂಗುವ ಜ್ವಾಲಾಮುಖಿ, ಬೇಟೆ (ಮಗನೆ)! ೯. ಬಡವನ ದೇವರು ಗರ್ಜಿಸುತ್ತಿದ್ದರೆ, ಕೇಳಿಸುತ್ತಿದ್ದರೆ ಆ ಸದ್ದು—ಕಲ್ಲಿನ ದೇವರು, ಗಿಲ್ಲಿನ ದೇವರು ಪೇರಿ ಕಿತ್ತಾರು (ಓಡಿಹೋದಾರು) ಎದ್ದು! ೧೦. ಬೆನ್ನಿನ ಚರ್ಮ ಭದ್ರವಾಗಿರಲಿ! ಬಡವನ ದೇವರಿಗೆ ಬಗ್ಗು! ಕಲ್ಲಿನ ದೇವರಿಗೆ ಹುಲ್ಲನ್ನೇ ತಿನ್ನಿಸಿ, ಸದ್ಯಕ್ಕೆ ಉಳಿದೆನೆಂದು ಹಿಗ್ಗು! ೧೧. ಲೋಕಕ್ಕೆ ಶಾಂತಿ—ಬಡವನ ದೇವರು ಮಲಗಿರುವವರೆಗೂ! ಬಡವನ ದೇವರು ಎದ್ದುನಿಂತ ಎಂದರೆ, ಪ್ರಳಯ ಅದಕ್ಕೇ ತಾನೆ! ೧೨. ಪ್ರಳಯ ಎಂದರೆ ಯಾರಿಗೇನು ಸುಖ? ನಾಶ—ಅರಸೂ, ಆಳೂ! ಸಾಯುವವರ ಜೊತೆಗೆ [illegible]ಯುವ ಬದಲು, ಎಲ್ಲರ ಸಂಗಡ ಬಾಳು!

**೭೪. ಪ್ರಶ್ನೆಗೆ ಉತ್ತರ** ೧. ತೃಪ್ತಿ ಕಂಡುಕೊಂಡವರಿಗೆ ಮಾತ್ರ ಹಿಡಿದು ರವಾನಿಸಿ [ಬಲವಂತದಿಂದ ಕಳುಹಿಸಿ] ಭೂಮಿಗೆ ಹತ್ತಿರ, ಮಿಕ್ಕವರಿಗೆ ಇಲ್ಲಿ ತಾವು (ಸ್ಥಳ) ಇಲ್ಲವೆಂದು ಬಂದ ಹಾಗೆಯೇ ಹಿಂದಕ್ಕೆ ಅಟ್ಟುತ್ತಿದ್ದೆ—ನನಗೆ ದೇವರ ಪಟ್ಟವಿದ್ದರೆ! ೨. ಊರಲ್ಲೆಲ್ಲ ರಾಗಿ ಬಿತ್ತಿಸಿ, ಖಾಲಿ (ಬರಿಯ) ಜಾಗ(ಸ್ಥಳ)ದಲ್ಲೆಲ್ಲ ಗುಡಿಸಿಲು ಎತ್ತಿಸಿ, ಬಡವರ ಬದುಕಿನ ಒಡಕನ್ನು ಮುಚ್ಚಿ, ಅವರಿಗೆ ತಮ್ಮನ ಹಾಗೆ ಆಗುತ್ತಿದ್ದೆ! ರಾಜನ ಪದವಿಗೆ ನಗುತ್ತಿದ್ದೆ! ೩. ಗುಡಿಗಳ ಪಕ್ಕದಲ್ಲಿ ಗುಡಿಸಿಲು ಹೂಡಿ, ಬಡವನಿಗೂ (ಬಡವನನ್ನೂ) ದೇವರು ಮಾಡಿ, ಬಡವರ ಬೋನಕ್ಕೆ (ಉಣಿಸಿಗೆ) ಬಗ್ಗಿಸುತ್ತಿದ್ದೆ ಪೂಜಾರಿಗಳಿಗೆ ಎಮ್ಕೆ (ಮೂಳೆ)ಯನ್ನು! ಗುರು ನಾನಾಗುವುದು ಸುಮ್ಮನೆಯೇ! ೪. ಬೀದಿಯ ಉದ್ದಕ್ಕೂ ಗೇಣಿಗೆ ಒಂದೊಂದು ದಪ್ಪ ದೊಡ್ಡ ಬಾಯಿನ ನಲ್ಲಿ ತಂದು, ತಿರುಗಿಸುತ್ತಿದ್ದರೆ—ಹೆಂಡ ಮೊದಲು! ಮುನಿಸಿಪಾಲಿಟಿಗೆ ನಾನಿದ್ದರೆ! ಆಗ ನನಗೇನಾದರೂ ಜ್ಞಾನವಿದ್ದರೆ!

**೭೫. ಒಗ್ಗಟ್ಟಿನ ಗೋಂದು** ೧. ಪಂಙ್ತಿಭೇದ ಪಾಪವೆಂದು ಹೇಳಿ ಶಾಸ್ತ್ರ ಹೇಳಿದೆಯಂತೆ! ಹುಟ್ಟಿದವರ ಪಂಙ್ತಿಯಲ್ಲಿ ಭೇದ ಬೇಡವೆಂದರೆ—ಬಂತು ಕೋಪದ ಕಂತೆ (ಕಟ್ಟು)! ೨. ನಮಗೇನಾದರೂ ಸಿಕ್ಕುವುದಾದರೆ—ಶಾಸ್ತ್ರದ ಸಹಾಯ ಬೇಕು; ನಮ್ಮ ಸುಖಕ್ಕೇನಾದರೂ ಕೊರತೆ (ಊನ) ಬಂದರೆ—'ಶಾಸ್ತ್ರವನ್ನು ಆಚೆಗೆ ನೂಕು!' ೩. ಅವರವರ ನ್ಯಾಯಕ್ಕೆ ಅವರವರಿಗೆ ಒಂದೊಂದು ಶಾಸ್ತ್ರ ಹುಟ್ಟಿಕೊಂಡು ಬಂದು, ಬಹಳ ನೀರಾಗಿಹೋಯಿತು, ಲೋಕದಲ್ಲಿ ಒಗ್ಗಟ್ಟಿನ ಗೋಂದು! ೪. ಒಗ್ಗಟ್ಟಿನ ಗೋಂದು ಅಂಟದೆ ಹೋದರೆ, ಲೋಕ ಚುಕ್ಕಾ ಚೂರು! ಲೋಕ ಮುಳುಗುವುದಕ್ಕೆ ತಾವು (ಅವಕಾಶ) ಕೊಟ್ಟವನಿಗೆ—ಮುಖಕ್ಕೆ ಸೆಗಣಿ ನೀರು!

**೭೬. ನಾಡಿನ ಬಡವ ಸರ್ಕಸ್ಸಿನ ಸಿಂಹ** ೧. ನಾಡಿನ ಬಡವ! ಸರ್ಕಸ್ಸಿನ ಸಿಂಹ! ಕಮ್ಚಿ (ಚಾವಟಿ) ಹಿಡಿದವನು ಬೆಪ್ಪು ನನ್ನ ತಮ್ಮ! ಅವನಿಗೆ ಹೆದರಿ, ಬಾಲ ಮುದುರಿ, ಮೂಲೆಯಲ್ಲಿ ಮುದುರಿಕೊಳ್ಳಬೇಕೇ? ಕಮ್ಚಿ ಹಿಡಿದವನ ಕೈಯಲ್ಲಿ ಏನಾಗುತ್ತದೆ? ಅವನಿಗೆ ಹೆದರಿಕೊಳ್ಳಬೇಕೇ? ೨. ನಿನಗೇ ಗೊತ್ತಿಲ್ಲ ನಿನ್ನ ಶಕ್ತಿ! ಹೇಳುವುದಕ್ಕೆ ಬಂದರೆ ಸಿರ್‍ರೆಂದು ರೇಗುತ್ತಿ! ಕೂಗಿಕೊಂಡು ಕಚ್ಚುವುದಕ್ಕೆ ಮೇಲೆ ಹಾರಿ ಬರುತ್ತಿ! ಏನು ಹೇಳೋಣ ಸಿಂಹ! ಮಕ್ಕಳನ್ನು ಹಿಡಿದಹಾಗೆ ಹಿಡಿದಿದೆ ನಿನ್ನನ್ನು—ಕಮ್ಚಿ ಹಿಡಿಯುವ ಗುಮ್ಮ! ೩. ದುಡಿಯುವವನು ನೀನು! ಪಡೆಯುವವನು ಅವನು! ಬೋನು (ಪಂಜರ) ನಿನಗಾದರೆ ಅವನಿಗೆ ಗೌನು (ಮೇಲಂಗಿ) [ಗೌರವದ ಗುರುತು]! ದುಡಿದೂ ದುಡಿದೂ ದುಡ್ಡಿನ ಬೆಟ್ಟ ನೀ ಮಾಡಿಹಾಕು! ಪೇರಿಸು (ಮೇಲೆ ಮೇಲೆ ರಾಶಿಹಾಕು)! ನಿನ್ನ ದುಡ್ಡಿನಲ್ಲೇ 'ತೆಗೆದುಕೋ' ಎಂದು ಒಂದು ಕಾಸು ನಿನಗೆ ಅವನು ಎಸೆದರೆ, ಸೈರಿಸು! ೪. ಮೈ ನಿನಗಿದೆ! ಮನಸ್ಸೂ ಇದೆಯೊ! ನೀನು ನೋಡುವುದಿಲ್ಲ! ಶಕ್ತಿ ಇದೆ! ಉಕ್ಕುತ್ತ ಇದೆ! ನಿನಗೆ ಎಲ್ಲಾ ಇದೆ! ಸರಪಣಿ ಬಿಗಿದುಕೊಂಡು ಸುಮ್ಮನೆ ಯಾಕಿರಬೇಕು—ಎತ್ತಿ ಅದನ್ನು ಆಚೆಗೆ ಒದೆ! ೫. ಭೂಮಿಯಲ್ಲಿ ಮನುಷ್ಯ, ನೀರಿನಲ್ಲಿ ಮೀನು,, ಮೇಲೆ ನಕ್ಷತ್ರ ಎಲ್ಲಕ್ಕೂ ನೀನು—ಪ್ರಪಂಚಕ್ಕೆಲ್ಲ ಒಡೆಯ ನೀನು! ಏನು ಹೇಳೋಣ ನಿನಗೆ! ಗುಡಿಸುವ ಪೊರಕೆ ಆಗಿಹೋದನಲ್ಲ—ಯಜಮಾನನೇ ಮನೆಗೆ! ೬. ಕಮ್ಚಿಗೇನು ನೀನು ಹೆದರಿಕೊಬೇಕು? 'ಹ್ಞೊ' ಎಂದು ಒದರಿ (ಕೂಗಿ) ಗರ್ಜಿಸು, ಸಾಕು! ಮೈಯಲ್ಲಿ ಕೂದಲು ಶಠಂ ಎಂದು ಇರಲಿ! ಬಾಲದ ಬಾವುಟ ಏರಲಿ! ಕಮ್ಚಿ ಹಿಡಿದುಕೊಂಡು ಯಾವನು ಬಂದಾನು—ನೋಡೋಣ, ಬರುವವನು ಬರಲಿ!

**೭೭. ಶಕುನಿ** ೧. ದುರ್ಯೋಧನನಿಗೆ ಒಬ್ಬ ಶಕುನಿ ಸೇರಿಕೊಂಡು, ಎಕ್ಕ ಹುಟ್ಟಿ (ನಾಶವಾಗಿ) ಹೋಯಿತಣ್ಣ ಕೌರವನ ಮಂಡಿ [ತೊಡೆ]! ಹದಿನೆಂಟು ಅಕ್ಷೋಹಿಣಿ ಸೇನೆ ಸಿಬ್ಬಂದಿ (ಜೊತೆಯ ಪಡೆ), ಒಂದೆ ಹಿಡಿ ಬೂದಿಯಾಯಿತು ಯುದ್ಧದಲ್ಲಿ ಬೆಂದು! ೨. ಹಾಯಾಗಿ (ನಿರಾತಂಕವಾಗಿ) ಮಲಗಿದ್ದವನ ಹಾಸಿಗೆಗೆ ತಿಗಣೆ ಬಂದು ಸೇರಿಕೊಂಡ ಹಾಗೆ, ಸೇರಿಕೊಂಡ ಶಕುನಿ! ಶಕುನಿ ತಾನೂ ಸತ್ತು, ಜೊತೆಯವರನ್ನೂ ಸಾಯಿಸಿ, ಬಹಳ ತಕಲೀಫ್ (ತೊಂದರೆ) ಮಾಡಿದ, ಸುಮ್ಮನೆ ಸತಾಯಿಸಿ (ಗೋಳುಹುಯಿದು)! ೩. ಹೆಂಡವನ್ನು ಬುರುಡೆಯೇ ಪಟ್ಟಾಗಿ (ಪೂರ) ಹೊಡೆದ ಹಾಗೆ, ನಂಬಿದವರನ್ನು ಎತ್ತಿಹಾಕಿದ—ಶಕುನಿ ಎಂದರೆ ಹಾಗೆ! ಒಬ್ಬ ಶಕುನಿಯ ದೆಸೆಯಿಂದ ಏನೇನಾಗಿಹೋಯಿತು! ಪ್ರಪಂಚದ ಜೀವವೇ ಝಲ್ಲೆಂದು ಹೋಯಿತು! ೪. ಈಗ ಲೋಕದಲ್ಲಿ ಒಂದು ಹುಲ್ಲಿಗೆ ಒಂದು ಶಕುನಿ! ಅದು ನೆನಪಿಗೆ ತರುತ್ತದೆ—ಹಾಳು ಮನೆಯಲ್ಲಿ ಉಗನಿ! ಭಾರತವನ್ನೇ ಮಾಡಿಸಿತು ಹಿಂದೆ ಒಬ್ಬನ ನೀತಿ! ಈಗ ಏನಾಗುತ್ತದೋ ದೇವರಿಗೇ ಪ್ರೀತಿ!

---

## ಬಾಲಂಗೋಚಿ

**(ದಪ್ಪ ಸಂಖ್ಯೆ ಪದ್ಯದ್ದು ; ಸಣ್ಣ ಸಂಖ್ಯೆ ಚರಣದ್ದು)**

**೨೦ :** ೧. ದೇವರಿಗೆಂದು ತಂದ ತೆಂಗಿನಕಾಯನ್ನು ದೇವರಿಗೆ ಅರ್ಪಿಸಲು, ಕಾಯಿಗೆ ಇಷ್ಟು ಕಾಸೆಂದು ಕಾಣಿಕೆಯಾಗಿ ವಸೂಲುಮಾಡುವುದು ಕೆಲವು ಕಡೆ ರೂಢಿ. ಕಾಯಿ ಕಾಣಿಕೆಗಳು ಇಲ್ಲದೆ ಬರುವ ದರ್ಶನಾರ್ಥಿಗಳಿಗೆ 'ಮುಂದೆ ಹೋಗಿ ಬನ್ನಿ' ಎಂದು ಹೇಳಿಕಳುಹಿಸುವುದೂ ಸ್ವಲ್ಪ ಕಡೆ ರೂಢಿ.

**೨೭ :** ೬. ಮನೆಯ ಹತ್ತಿರ ಮಾರುವುದಕ್ಕೆ ಸೊಪ್ಪು ತಂದರೆ, ಕಾಸು ಕೊಡುವ ಬದುಲು ಅಕ್ಕಿಯ ನುಚ್ಚು ಕೊಟ್ಟು, ಸೊಪ್ಪು ಕೊಳ್ಳುವುದು ಹಿಂದೆ ಈ ಕಡೆ ವಾಡಿಕೆಯಾಗಿತ್ತು.

**೩೧ :** ೭. 'ಮೂಗಿನಲ್ಲಿ ಕನ್ನಡ ಪದ ಹಾಡುತ್ತೇನೆ' ಎಂದು 'ಕನ್ನಡ ಪದ'ದಲ್ಲಿ ಹಾಡಿದುದನ್ನು ನೆನೆದಿದ್ದಾನೆ.

**೩೨ :** ೧. ನೀರನ್ನು ಮುಟ್ಟಿ ದ್ರಾಕ್ಷಾರಸವಾಗಿ ಮಾಡಿದುದು ಯೇಸುಕ್ರಿಸ್ತನ ಮೊದಲನೆಯ ಪವಾಡ.

೩೪ : ೧. 'ಈ ಮೋಸ ದೋಸವಲ್ಲ' ಎಂಬ ಪದದಲ್ಲಿಯು ಮೋಸದ ಸ್ಮರಣೆ.

೩೫ : ೧. ಒಂದು ಅಗ್ಗಿಷ್ಟಿಕೆ, ಒಂದು ಕೋಳಿ ಇಟ್ಟುಕೊಂಡು, ತನ್ನ ಕೋಳಿಯಿಂದಲೇ ಊರಿಗೆ ಹಗಲು, ಎಂದು ತಿಳಿದುಕೊಂಡಿದ್ದವಳ ಕತೆ.

೪೧ : ೩. ಲಗ್ನದ ದಿನ, ವರನು ವಧುವಿನ ಹಣೆಗೆ ಕುಂಕುಮವಿಟ್ಟು, ಕನ್ನಡಿ ತೋರಿಸುವುದು ಅವರಲ್ಲಿ ಒಂದು ಶಾಸ್ತ್ರವಿಧಿ.

೪೨ : ೩. ಗಂಗಾಜಲವನ್ನು ತಂದರೆ, ಅದು ಕೆಡದ ಹಾಗೆ ಒಂದು ಪಾತ್ರೆಯಲ್ಲಿ ಅದನ್ನು ಮುಚ್ಚಿಟ್ಟು ಕಾಪಾಡುವರು.

೪೬ : ೧. ಕೆಂಪಿನ ಬಟ್ಟೆ ಕಂಡರೆ ಬರುವಷ್ಟು ರಾಗಾವೇಶ ಗೂಳಿಗೆ ಬೇರಾವುದರಿಂದಲೂ ಬಾರದಂತೆ ! ೨. ಮಲ್ಲಿಗೆ ಹೆಚ್ಚು ಅರಳುವುದು ರಾತ್ರಿಯಲ್ಲಿ.

೪೮ : ೨. ಹನುಮಂತನು ಸಮುದ್ರ ಹಾರಿದುದು.

೫೨ : ೨. ಶ್ರೀರಂಗಪಟ್ಟಣವು ಒಂದು ದ್ವೀಪ. ಅದರ ಬಳಿಗೆ ಬಂದ ಕಾವೇರಿಯು ಇಬ್ಭಾಗವಾಗಿ, ಪಟ್ಟಣವನ್ನು ಆಚೆ ಈಚೆ ತಬ್ಬಿಕೊಂಡು ಹರಿದು, ಬಿಟ್ಟು ಹೋಗುವಾಗ ಕಾವೇರಿಯ ಎರಡು ಸೀಳೂ ಸೇರಿ ಹೋಗುತ್ತದೆ. ಅದೇ ಸಂಗಮ.

೫೩ : ೨. ಹೋದ ಕಡೆಯಲ್ಲೆಲ್ಲ, ಅಲ್ಲಿನ ಹೆಂಡದ ರುಚಿ ನೋಡುವುದು ರತ್ನನ ಅಭ್ಯಾಸ.

೫೪ : ೪. ಮಡಿಕೇರಿಯಲ್ಲಿ ಪೂವಮ್ಮನೆಂಬ ತಂಗಿಯನ್ನು ಸಂಪಾದಿಸಿದ ರತ್ನನಿಗೆ, ಮಡಿಕೇರಿಯ ಯಾವ ಹೆಣ್ಣು ಹೆಸರಾದರೂ ಪೂವಮ್ಮನೆಂದಹಾಗೆಯೆ ! ಮಡಿಕೇರಿಯು ಕೊಡಗಿನ ರಾಜಧಾನಿಯಾದ ಸಲುವು, ಕೊಡಗಿನವರು ಎಲ್ಲರೂ ಪೂವಮ್ಮನವರೇ !

೬೦ : ೧. ದುರ್ವಾಸನು ಕೊಟ್ಟ ಹೂವನ್ನು ಅಲಕ್ಷಿಸಿದ ಇಂದ್ರನು ಪದವಿ ಕಳೆದುಕೊಂಡುದು.

೬೩ : ೪. ಬ್ರಹ್ಮನದು ತಾಮಸಪ್ರಕೃತಿ, ಜಡಸ್ವಭಾವ. ಅದರಿಂದ ವಿಷ್ಣುವು ಹೇಗಿರಬೇಕು ?—ಎಂದು.

೬೫ : ೮. 'ಅನ್ಯಮಿಂದ್ರಂ ಕರಿಷ್ಯಾಮಿ' ಎಂದು ಮೊದಲಾದ ವಿಶ್ವಾಮಿತ್ರ ಸೃಷ್ಟಿಯನ್ನು ನೆನೆದು.

೬೮ : ೧. 'ಬಂದೇ ಗಂಗೆ'—ಗಂಗಮ್ಮನ ಪಾಲಾಗುವುದೆಂದರೆ ಪ್ರಾಣಬಿಡುವುದು.

೬೯ : ೧. ಗೇರುಸೊಪ್ಪೆಯ ಜಲಪಾತಕ್ಕೆ 'ಜೋಗ್' ಎಂಬುದೂ ಹೆಸರುಂಟು. ಇಲ್ಲಿ ನಾಲ್ಕು ಪಾತಗಳುಂಟು: ರಾಜ (Raja), ರೋರರ್ (Roarer), ರಾಕೆಟ್ (Rocket), ಲೇಡಿ (Lady). ೨. 'ರಾಜ'ದಲ್ಲಿ ನೀರು ಏಕಘನವಾಗಿ (One mass), ನಿಜವಾಗಿ ರಾಜಗಮನದಿಂದ, ಅನಂತರವಾಗಿ ಬೀಳುತ್ತದೆ. ೩. 'ರೋರರ'ನಲ್ಲಿ ಬೀಳುವ ನೀರು ಚಾಚಿದ ಶಿಲೆಯೊಂದಕ್ಕೆ ಬಡಿದು, ಆರ್ಭಟಿಸಿ, ಚಿಮ್ಮಿ, ಕೆಳಗೆ ನೆಗೆಯುತ್ತದೆ. ೪. 'ರಾಕೆಟ್ಟ'ನಲ್ಲಿ ನೀರು ಮೇಲಿಂದ ಬಿದ್ದು, ನಡುದಾರಿಯಲ್ಲಿ ತುಂತುರಾಗುತ್ತದೆ. ಆ ತುಂತುರಿನ ಬಿಳಿಕಣಗಳು ಮೇಲೆ ಹತ್ತಿ ಹೋಗುವಾಗ, ಹಿಂದೆ ಬೀಳುವ ನೀರಿನ ಕಾಂಡಪಟದ ಮೇಲೆ ತಾರಾ ಮಂಡಲಗಳು ಸಿಡಿಸಿದ ರೀತಿಯಿರುತ್ತದೆ. ೫. 'ಲೇಡಿ'ಯಂತೂ ಮಂದಗಮನೆಯಂತೆ ಗರತಿಯ ಗತಿಯಲ್ಲಿ ಜಾರುತ್ತದೆ. ೬. ಮೇಲೆದ್ದ ಜಲಕಣಗಳ ಮೇಲೆ ಸೂರ್ಯರಶ್ಮಿ ಬಿದ್ದು, ಹತ್ತಾರು ಕಾಮನಬಿಲ್ಲುಗಳು ಒಂದನ್ನೊಂದು ತಬ್ಬುವುವು. ೮. ಅರವಟ್ಟಿಗೆಯಲ್ಲಿ, ಇಲ್ಲ ಸಮಾರಾಧನೆಗಳಲ್ಲಿ ಪಾನಕ ಅಥವಾ ಎಂಥವೇ ಊಟ ಉಣಿಸುಗಳಾದರೂ, ಮಾಡುವವರಿಗೆ ಮಾಡುವುದೇ, ತಿನ್ನುವವರಿಗೆ ತಿನ್ನುವುದೇ ಹೊರತು, ಮಾಡುವವರು ತಿನ್ನುವುದಾಗಲಿ, ತಿನ್ನುವವರು ಮಾಡುವುದಾಗಲಿ ತೀರ ಅಪರೂಪವೆಂಬುದು ಲೋಕಾನುಭವದ ಮಾತು. ಎಂದರೆ ಕಷ್ಟಪಡುತ್ತಿರುವವರಿಗೆ ಕಷ್ಟವೇ! ಸುಖಪಡುತ್ತಿರುವವರಿಗೆ ಸುಖವೇ!

೭೦ : ಇದು ಒಂದು ಉಪಮಾನದ ಕತೆ. ಕೊಳವೆಂಬುದು ಈ ಲೋಕ. ಬೆಂಡೆಂಬುದು ಒಂದು ಜೀವ. ನುಗ್ಗುವ ಹೊಳೆಗಳೇ ಬಂದು ಅಡಸುವ ಕಷ್ಟಗಳು. ಕಟ್ಟಿಯೆಂಬುದು ಜೀವವನ್ನು ಇರಗೊಡಿಸಲು ಬೇಕಾದ ಸೌಕರ್ಯ.

೭೪ : ಇವು ಬೇವಾರ್ಸಿಯು ರತ್ನನಿಗೆ ಹಾಕಿದ ಪ್ರಶ್ನೆಗಳು: ದೇವರು, ದೊರೆ, ಧರ್ಮಗುರು, ಮುನಿಸಿಪಲು ಪ್ರೆಸಿಡೆಂಟು—ನೀನಾದರೆ ಏನು ಮಾಡುತ್ತೀಯೆಂದು. ೨. ರಾಗಿಯೇ ರತ್ನನಂಥ ಜನರಿಗೆ ಮುಖ್ಯವಾದ ಆಹಾರ. ೪. ಇಲ್ಲಿ ಹೆಂಡವೆಂಬುದು ಜೀವಾಧಾರವಸ್ತುವಿಗೆ ಸಂಕೇತ.

೭೫ : ೧. ಊಟಕ್ಕೆ ಕುಳಿತಾಗ, ಒಂದೇ ಪಂಙ್ತಿಯಲ್ಲಿ ಕುಳಿತವರಿಗೆ ಬಡಿಸುವುದರಲ್ಲಿ ಭೇದ ತೋರಿಸಬಾರದೆಂದು ಹಿರಿಯರ ಮಾತು.

---

# ಒಂದು ಎರಡು ಪದಗಳ ಪಟ್ಟಿ

## ಒಂದು ಎರಡು ಪದಗಳ ಪಟ್ಟಿ

# ಅ ಆ ಇ ಈ ಪದಗಳ ಪಟ್ಟಿ

## ಅ ಆ ಇ ಈ ಪದಗಳ ಪಟ್ಟಿ

# ಪದಗಳ ಪೈಲಾ ಪಂಗ್ತಿ